# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜೂನ್ ೧೮, ೨೦೧೫ (ಜ್ಯೇಷ್ಠ ೨೮, ಶಕ ವರ್ಷ ೧೯೩೭)<br>Bangalore, Thursday, June 18, 2015 (Jeishta 28, Shaka Varsha 1937) | ಸಂಚಿಕೆ ೨೫<br>Issue 25 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಕೆ.ಸಿ. ಸಿದ್ಧಪ್ಪ, ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ (ಹಿಂದಿನ ತಹಶೀಲ್ದಾರ್, ಹುನಗುಂದ) ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ, ತಹಶೀಲ್ದಾರ್ ಕಛೇರಿ, ಹುನಗುಂದ ಮತ್ತು ಶ್ರೀ ಎಸ್.ಹೆಚ್. ಮುದಗಲ್ಲ, ಪ್ರಸ್ತುತ ದ್ವಿತೀಯ ದರ್ಜೆ ಸಹಾಯಕರು, ತಹಶೀಲ್ದಾರ್ ಕಛೇರಿ, ಬದಾಮಿ (ಹಿಂದಿನ ದ್ವಿತೀಯ ದರ್ಜೆ ಸಹಾಯಕ, ತಹಶೀಲ್ದಾರ್ ಕಛೇರಿ, ಹುನಗುಂದ) ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 27 ಸೇಇವಿ 2009 ದಿನಾಂಕ 11-11-2011.
2) ಪ್ರಾದೇಶಿಕ ಆಯುಕ್ತರ ಕಾರ್ಯಾಲಯ, ಬೆಳಗಾವಿ ಇವರ ಕಾರಣ ಕೇಳುವ ನೋಟೀಸ್ ಸಂಖ್ಯೆ ಪ್ರಾಆಬೆ/ಸಿಬ್ಬಂದಿ (2)(i)/81/2008-09, ದಿನಾಂಕ 12-4-2012.
3) ಆದೇಶ ಸಂಖ್ಯೆ ಪ್ರಾಆಬೆ/ಸಿಬ್ಬಂದಿ (2)(i)/81/2008-09, ದಿನಾಂಕ 31-7-2012.
4) ವಿಚಾರಣಾಧಿಕಾರಿಯವರ ಪತ್ರ ಸಂಖ್ಯೆ ಜಿಪಂಬಾ/ಆಡಳತ/ನ್ಯಾಪ್ರ/ಸಿಬ್ಬಂದಿ/ಸಿಆರ್-3/2012/3317, ದಿನಾಂಕ 28-12-2012.
5) ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 27 ಸೇಇವಿ 2009, ದಿನಾಂಕ 26-4-2013.
6) ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಕಂಇ 26 ಎಡಿಇ 2009, ದಿನಾಂಕ 13-5-2014.
7) ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ ಸಿಆಸುಇ 27 ಸೇಇವಿ 2009, ದಿನಾಂಕ 10-11-2014.
8) ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಇವರ ಮನವಿ ದಿನಾಂಕ 23-3-2015.

**ಪ್ರಸ್ತಾವನೆ :**

ಶ್ರೀ ಕೆ.ಸಿ. ಸಿದ್ಧಪ್ಪ, ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ (ಹಿಂದಿನ ತಹಶೀಲ್ದಾರ್ ಹುನಗುಂದ), ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಮತ್ತು ಶ್ರೀ ಎಸ್.ಹೆಚ್. ಮುದಗಲ್ಲ, ಪ್ರಸ್ತುತ ದ್ವಿತೀಯ ದರ್ಜೆ ಸಹಾಯಕರು, ತಹಶೀಲ್ದಾರ್ ಕಛೇರಿ, ಬದಾಮಿ (ಹಿಂದಿನ ದ್ವಿತೀಯ ದರ್ಜೆ ಸಹಾಯಕ, ತಹಶೀಲ್ದಾರ್ ಕಛೇರಿ, ಹುನಗುಂದ) ಇವರುಗಳು ಈ ಹಿಂದೆ ತಹಶೀಲ್ದಾರ್ ಕಛೇರಿ, ಹುನಗುಂದ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾದ ಈ ಕೆಳಕಂಡ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದನ್ವಯ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವ ಷರತ್ತಿಗೆ ಒಳಪಟ್ಟಂತೆ ಸದರಿ ಅಧಿಕಾರಿ/ನೌಕರರುಗಳ ವಿರುದ್ಧ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11ನ್ನು ಓದಿಕೊಂಡಂತೆ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕಂದಾಯ ಇಲಾಖೆಯ ಮೂಲಕ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರಿಗೆ ಅನುಮತಿಯನ್ನು ನೀಡಿ ಆದೇಶಿಸಲಾಗಿರುತ್ತದೆ.

ಅ) ಕರ್ನಾಟಕ ಇನಾಂ ರದ್ಧತಿ ಕಾಯಿದೆ 1977ರ ಕಲಂ 12(2)ರ ಪ್ರಕಾರ ಪರಭಾರೆ ಮಾಡಲು ಹುನಗುಂದ ತಾಲ್ಲೂಕಿನ ಹುಲಗಿನಾಳ ಗ್ರಾಮದ ರಿ. ಸರ್ವೆ ನಂ. 143ಕ್ಕೆ ಸಂಬಂಧಿಸಿದಂತೆ ಖೊಟ್ಟಿ ಆದೇಶದ ಕೈ ಬರಹದ ಪ್ರತಿಗೆ ದೃಢೀಕರಿಸಿದ್ದು ತತ್ಪರಿಣಾಮವಾಗಿ ಗ್ರಾಮದ ದಪ್ತರದಲ್ಲಿ ಅಮಲ ಬಜಾವಣೆಯಾಗಿದೆ ಇವರು ಕೈಬರಹದ ಪ್ರತಿಯನ್ನು ದೃಢೀಕರಿಸುವ ಅವಶ್ಯಕತೆ ಇರಲಿಲ್ಲ. ಅನಾವಶ್ಯಕವಾಗಿ ಅಥವಾ ಪೂರ್ವಗ್ರಹ ವೇದಿಕರಾಗಿ ದೃಢೀಕರಿಸಿರುವುದು.

ಆ) ಕಛೇರಿಯ ದಾಖಲೆಗಳನ್ನು ಕಛೇರಿಯ ಹೊರಗಡೆ ಖಾಸಗಿ ವ್ಯಕ್ತಿಯೊಬ್ಬರ ಮನೆಯಲ್ಲಿ ಸಂಗ್ರಹಿಸಿಡಲು ಕಾರಣರಾಗುವ ಮೂಲಕ ಸರ್ಕಾರಿ ಅಧಿಕಾರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನೋಟೀಸಿನೊಂದಿಗೆ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಆರೋಪಿತ ಅಧಿಕಾರಿ / ನೌಕರರುಗಳಿಗೆ ಕ.ನಾ.ಸೇ. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 11ನ್ನು ಓದಿಕೊಂಡಂತೆ ನಿಯಮ 13ರಡಿ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಆರೋಪಿತ ಅಧಿಕಾರಿ / ನೌಕರರುಗಳ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದನ್ವಯ ಕ.ನಾ.ಸೇ (ಸಿಸಿಎ) 1957ರ 11(2)ರನ್ವಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಅದೇ ನಿಯಮಾವಳಿಗಳ ನಿಯಮ 11(5)(ಸಿ) ಅನ್ವಯ ತಹಶೀಲ್ದಾರ್, ಹುನಗುಂದ ಇವರ ಕಾರ್ಯಾಲಯದ ಸಿಬ್ಬಂದಿ ಶಾಖೆಯ ಮೇಲ್ವಿಚಾರಣೆ ಶಿರಸ್ತೆದಾರರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತಾರೆ.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ವಿಚಾರಣಾ ವರದಿಯಲ್ಲಿ ಆಪಾದಿತ ಅಧಿಕಾರಿ / ನೌಕರರುಗಳ ವಿರುದ್ಧ ಹೊರಿಸಲಾಗಿದ್ದ ಎರಡು ಆರೋಪಗಳಿಗೆ ಸಂಬಂಧಿಸಿದಂತೆ ತಮ್ಮ ನಿರ್ಣಯವನ್ನು ಈ ಕೆಳಕಂಡಂತೆ ದಾಖಲಿಸಿರುತ್ತಾರೆ ಃ

**ಆಪಾದನೆ-1 ಃ**

ಶ್ರೀ ಕೆ.ಸಿ. ಸಿದ್ಧಪ್ಪ, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಸ್.ಹೆಚ್. ಮುದಗಲ್ಲ, ದ್ವಿತೀಯ ದರ್ಜೆ ಸಹಾಯಕ ಇವರುಗಳ ಮೇಲಿನ ಮೊದಲನೇ ಆರೋಪವು ರುಜುವಾತಾಗಿರುವುದಿಲ್ಲ ಹಾಗೂ ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಇವರ ಮೇಲಿನ ಮೊದಲನೇ ಆರೋಪವು ಭಾಗಶಃ ಸಾಬೀತಾಗಿರುತ್ತದೆ.

**ಆಪಾದನೆ-2 ಃ**

ಆಪಾದಿತ ಮೂವರೂ ಅಧಿಕಾರಿ / ನೌಕರರುಗಳ ವಿರುದ್ಧ ಹೊರಿಸಲಾಗಿದ್ದ ಎರಡನೇ ಆರೋಪವು ರುಜುವಾತಾಗಿಲ್ಲವೆಂದು ನಿರ್ಣಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಅನಧಿಕೃತ ಟಿಪ್ಪಣಿಯಲ್ಲಿ ವಿಚಾರಣಾ ವರದಿಯ ಬಗ್ಗೆ ಕಂದಾಯ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ನಿರ್ಣಯಿಸಿರುವುದನ್ನು ಕಂದಾಯ ಇಲಾಖೆಯು ಒಪ್ಪಿರುವುದಾಗಿ ತಿಳಿಸಿರುತ್ತದೆ.

ವಿಚಾರಣಾಧಿಕಾರಿಗಳು ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೇದಾರ ಇವರ ವಿರುದ್ಧ ಹೊರಿಸಲಾಗಿದ್ದ ಮೊದಲನೇ ಆರೋಪವು ಭಾಗಶಃ ರುಜುವಾತಾಗಿರುವುದಾಗಿ ನಿರ್ಣಯಿಸಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಜಾರಿ ಮಾಡಿ ವಿಚಾರಣಾ ವರದಿಯ ಬಗ್ಗೆ ತಮ್ಮ ಹೇಳಿಕೆಯನ್ನು 15 ದಿವಸಗಳೊಳಗೆ ಸಲ್ಲಿಸುವಂತೆ ತಿಳಿಸಲಾಗಿತ್ತು.

ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೇದಾರ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಮನವಿಯಲ್ಲಿ ವಿಚಾರಣಾ ವರದಿಯ ಬಗ್ಗೆ ತಮ್ಮ ಹೇಳಿಕೆಯನ್ನು ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ ಃ

> "ಈ ಪ್ರಕರಣದಲ್ಲಿ ತಾವು ಯಾವುದೇ ಕೊಟ್ಟಿ ದಾಖಲೆಯನ್ನು ಮಾಡಿರುವುದಿಲ್ಲ. ಮಾನ್ಯ ಉಪವಿಭಾಗಾಧಿಕಾರಿಗಳು, ಬಾಗಲಕೋಟೆ ಇವರ ಆದೇಶ ಸಂಖ್ಯೆ ಕೆಎಲ್‌ಆರ್‌ಸಿಆರ್ 28/97-98, ದಿನಾಂಕ 26-6-1997ರಂದು ಆದೇಶ ಮಾಡಿದ ಪ್ರಕರಣವನ್ನು ವಿಷಯ ನಿರ್ವಾಹಕರು ಕೈಬರಹ ಬರೆದ ದೃಢೀಕೃತ ನಕಲಿಗೆ ಇನಿಷಿಯಲ್ ಮಾಡಿಸಿ ಕೊಂಡು ನಂತರ ತಹಶೀಲ್ದಾರ್ ಸಹಿ ಪಡೆದಿರುತ್ತಾರೆ, ಯಾವುದೇ ದುರುದ್ದೇಶದಿಂದ ಮಾಡಿರುವುದಿಲ್ಲವೆಂದೂ ಮತ್ತು ತಾವು ಯಾವುದೇ ತಪ್ಪು ಮತ್ತು ಕರ್ತವ್ಯಚ್ಯುತಿ ಎಸಗಿರುವುದಿಲ್ಲವೆಂದೂ, ತಮಗೆ ಆರೋಗ್ಯ ಸಮಸ್ಯೆಗಳಾದ ಪಾರ್ಶ್ವವಾಯು, ರಕ್ತದೊತ್ತಡ ಹಾಗೂ ಸಕ್ಕರೆ ಖಾಯಿಲೆಗಳಿದ್ದು ಈಗಾಗಲೇ ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದು, ನಿವೃತ್ತಿ ವೇತನ ಇತ್ಯರ್ಥವಾಗದೇ ಮಾನಸಿಕವಾಗಿ ಕುಗ್ಗಿರುತ್ತೇನೆಂದೂ, ಅಲ್ಲದೇ ಜಂಟಿ ಇಲಾಖಾ ವಿಚಾರಣೆ ನಡೆಸಿರುವ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ಭಾಗಶಃ ಸಾಬೀತಾಗಿಲ್ಲವೆಂದು ವರದಿಯನ್ನು ಸಲ್ಲಿಸಿರುತ್ತಾರೆ. ಇದರಿಂದ ತಮ್ಮ ಮೇಲೆ ಹೊರಿಸಿರುವ ಆಪಾದನೆಯು ರುಜುವಾತಾಗಿಲ್ಲವೆಂದೇ ಭಾವಿಸಬೇಕಾಗುತ್ತದೆ. ಆದ್ದರಿಂದ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಮಾನವೀಯತೆ ದೃಷ್ಟಿಯಿಂದ ಪರಿಗಣಿಸಿ ತಮ್ಮನ್ನು ಆಪಾದನೆಯಿಂದ ವಿಮುಕ್ತಿಗೊಳಿಸಲು ಕೋರಿರುತ್ತಾರೆ."

ಶ್ರೀ ಬಿ.ಬಿ. ನಾಯ್ಕೋಡಿ, ಶಿರಸ್ತೇದಾರ ಇವರು ಈಗಾಗಲೇ ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಮತ್ತು ವಿಚಾರಣಾಧಿಕಾರಿಗಳು ತಮ್ಮ ವಿಚಾರಣಾ ವರದಿಯಲ್ಲಿ ಶ್ರೀ ಬಿ.ಬಿ. ನಾಯ್ಕೋಡಿ, ಶಿರಸ್ತೇದಾರ ಇವರ ವಿರುದ್ಧ ಹೊರಿಸಲಾಗಿದ್ದ ಎರಡು ಆರೋಪಗಳಲ್ಲಿ 1ನೇ ಆರೋಪವು ಮಾತ್ರ ಭಾಗಶಃ ಸಾಬೀತಾಗಿರುವುದೆಂದು ಹಾಗೂ 2ನೇ ಆರೋಪವು ಸಾಬೀತಾಗಿರುವುದಿಲ್ಲ ಎಂದು ನಿರ್ಣಯಿಸಿರುವುದರಿಂದ ಮತ್ತು ವಿಚಾರಣಾಧಿಕಾರಿಗಳು ಇವರ ವಿರುದ್ಧ ಹೊರಿಸಲಾಗಿದ್ದ ಆರೋಪವು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ನಿರ್ಣಯಿಸದೇ ಇರುವುದರಿಂದ 2ನೇ ಕಾರಣ ಕೇಳುವ ನೋಟೀಸ್‌ಗೆ ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಇವರು ಸಲ್ಲಿಸಿರುವ ಹೇಳಿಕೆಯನ್ನು ಒಪ್ಪಲು ಸರ್ಕಾರವು ನಿರ್ಧರಿಸಿರುತ್ತದೆ.

ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಕೆ.ಸಿ. ಸಿದ್ದಪ್ಪ, ಇವರ ವಿರುದ್ಧ ಕಲಂ 468ರೆ/ವಿ 34 ಐಪಿಸಿ ಅನ್ವಯ ಹುನಗುಂದ ಪೋಲೀಸ್ ಠಾಣೆಯಲ್ಲಿ ದಾಖಲಾಗಿರುವ ಮೊಕದ್ದಮೆ ಸಂಖ್ಯೆ 129/2008ಕ್ಕೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 2 ಸೇಇವಿ 2009, ದಿನಾಂಕ 11–11–2011ರನ್ವಯ ಸದರಿ ಅಧಿಕಾರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಅನುಮತಿ ನೀಡಲಾಗಿರುತ್ತದೆ.

ಇಲಾಖಾ ಶಿಸ್ತು ವ್ಯವಹರಣೆಗಳು ಮತ್ತು ನ್ಯಾಯಾಂಗ ವ್ಯವಹರಣೆಗಳು ಬೇರೆ ಬೇರೆಯಾಗಿರುವುದರಿಂದ ಮತ್ತು ಸರ್ಕಾರಿ ನೌಕರನು ಕ್ರಿಮಿನಲ್ ಆರೋಪದ ಮೇಲೆ ತಪ್ಪಿತಸ್ಥನೆಂದು ತೀರ್ಪು ನೀಡಿದ ಸಂದರ್ಭದಲ್ಲಿ ಅಂತಹ ನಿರ್ಣಯವು ಸಂವಿಧಾನದ 311(2) ಮತ್ತು 309 ನೇ ಅನುಚ್ಛೇದದಡಿ ನಡೆಸುವ ಇಲಾಖಾ ವಿಚಾರಣೆಯಲ್ಲಿನ ತೀರ್ಮಾನಕ್ಕೆ ಸಮಾನವಾದುದು ಎಂದು ತೀರ್ಮಾನಿಸಿ ಕ.ನಾ.ಸೇ(ಸಿಸಿಎ) 1957ರ ನಿಯಮ 14(1)ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ನ್ಯಾಯಾಲಯದ ತೀರ್ಮಾನ ಪ್ರಕರಣದ ವಿಷಯಗಳು ಸಂದರ್ಭ ಸನ್ನಿವೇಶಗಳು ಮತ್ತು ಆತನು ತಪ್ಪಿತಸ್ಥನೆಂಬ ತೀರ್ಪಿಗೆ ಕಾರಣವಾದ ನಡತೆಯ ಆಧಾರದ ಮೇಲೆ ಕ.ನಾ.ಸೇ(ಸಿಸಿಎ) 1957ರ ನಿಯಮ 8 ರಡಿ ದಂಡನೆಯನ್ನು ವಿಧಿಸಲು ಅವಕಾಶವಿರುವುದರಿಂದ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು & ವಿಚಾರಣಾ ವರದಿಯ ಬಗ್ಗೆ ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಇವರು ಸಲ್ಲಿಸಿರುವ ಹೇಳಿಕೆಯನ್ನು ಪರಿಶೀಲಿಸಿ ಜಂಟಿ ಇಲಾಖಾ ವಿಚಾರಣೆಯ ಅಂತಿಮ ಆದೇಶವನ್ನು ಹೊರಡಿಸಲು ತೀರ್ಮಾನಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 27 ಸೇಇವಿ 2009 ಬೆಂಗಳೂರು, ದಿನಾಂಕ 28–5–2015.**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಸಿ. ಸಿದ್ದಪ್ಪ, ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ (ಹಿಂದಿನ ತಹಶೀಲ್ದಾರ್ ಹುನಗುಂದ), ಶ್ರೀ ಬಿ.ಬಿ. ನಾಯ್ಕೋಡಿ, ನಿವೃತ್ತ ಶಿರಸ್ತೆದಾರ ಮತ್ತು ಶ್ರೀ ಎಸ್.ಹೆಚ್. ಮುದಗಲ್ಲ, ಪ್ರಸ್ತುತ ದ್ವಿತೀಯ ದರ್ಜೆ ಸಹಾಯಕರು, ತಹಶೀಲ್ದಾರ್ ಕಛೇರಿ, ಬದಾಮಿ (ಹಿಂದಿನ ದ್ವಿತೀಯ ದರ್ಜೆ ಸಹಾಯಕ, ತಹಶೀಲ್ದಾರ್ ಕಛೇರಿ, ಹುನಗುಂದ) ಇವರುಗಳು ಈ ಹಿಂದೆ ತಹಶೀಲ್ದಾರ್ ಕಛೇರಿ, ಹುನಗುಂದ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿದ್ದ ಆರೋಪಗಳ ಬಗ್ಗೆ ಹೂಡಲಾದ ಜಂಟಿ ಇಲಾಖಾ ವಿಚಾರಣೆಯಲ್ಲಿ ಸದರಿ ಅಧಿಕಾರಿ / ನೌಕರರುಗಳ ವಿರುದ್ಧ ಹೊರಿಸಲಾಗಿದ್ದ ಆರೋಪಗಳು ಸಾಬೀತಾಗದೇ ಇರುವುದರಿಂದ ಸದರಿ ಆರೋಪಗಳಿಂದ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಜಂಟಿ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಸದರಿ ಅಧಿಕಾರಿ / ನೌಕರರುಗಳು ಪಡೆಯಬಹುದಾಗಿದ್ದ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

PR. 301

## ತೋಟಗಾರಿಕೆ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ ದಾವಣಗೆರೆ ತಾಲ್ಲೂಕಿನ ಶ್ಯಾಬನೂರು ಗ್ರಾಮದ ಸರ್ವೆ ನಂ:37ರಲ್ಲಿ ಗಾಜಿನ ಮನೆ ನಿರ್ಮಾಣ ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ಉದ್ಯಾನವನ ಅಭಿವೃದ್ಧಿಪಡಿಸಲು ಟ್ರಸ್ಟ್ ರಚಿಸುವ ಬಗ್ಗೆ

**ಓದಲಾಗಿದೆ:** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ತೋಜಂನಿ/ಉತೋಮ/ ತಾಸ/73/2013–14 ದಿನಾಂಕ: 20/27–01–2015

**ಸರ್ಕಾರದ ಆದೇಶ ಸಂಖ್ಯೆ: ತೋಇ 659 ತೋಇವಿ 2014 ಬೆಂಗಳೂರು ದಿನಾಂಕ: 19.02.2015**

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕಿನ ಶ್ಯಾಬನೂರು ಗ್ರಾಮದ ಬಳಿಯಿರುವ ಕುಂದುವಾಡ ಕೆರೆಯ ಹತ್ತಿರ ಸರ್ವೆ.ನಂ 37ರಲ್ಲಿ ಗಾಜಿನ ಮನೆ ಹಾಗೂ ಸುತ್ತಮುತ್ತ ಪ್ರದೇಶದಲ್ಲಿ ಹೊಸದಾಗಿ ಉದ್ಯಾನವನ ಅಭಿವೃದ್ಧಿಪಡಿಸಲು 6.10ಎಕರೆ ಜಮೀನನ್ನು ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯದ ಅಧಿಕೃತ ಜ್ಞಾಪನ ಪತ್ರ ಸಂ. ಎಲ್ಎನ್‌ಡಿ/ಸಿಆರ್/221/2014–15, ದಿನಾಂಕ: 7.11.2014ರಲ್ಲಿ ಮಂಜೂರು ಮಾಡಿ ಆದೇಶ ಹೊರಡಿಸಲಾಗಿದೆ. ಸದರಿ ಪ್ರದೇಶವು ಉತ್ತಮ ಪ್ರವಾಸಿ ತಾಣವಾಗಿಸಲು ಯೋಗ್ಯವಾಗಿದ್ದು ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧವಾಗಿ 2013–14 ಹಾಗೂ 2014–15ನೇ ಸಾಲಿನಲ್ಲಿ ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು, ಎಸ್–22 ಯೋಜನೆಯಡಿ ಒಟ್ಟು ರೂ.150.00 ಲಕ್ಷಗಳ ಕ್ರಿಯಾಯೋಜನೆಗೆ ಅನುಮೋದನೆ ದೊರೆತಿದ್ದು, ರೂ.125.00 ಲಕ್ಷಗಳು ಬಿಡುಗಡೆಯಾಗಿರುತ್ತದೆ.

ಅ.ಸ.ಪತ್ರ ಸಂಖ್ಯೆ: ತೋಉನಿ/ಸತೋನಿ/ರಾವ/ದಾ/117/14–15, ದಿನಾಂಕ:09.12.2014ರಲ್ಲಿ ಜಿಲ್ಲಾಧಿಕಾರಿಗಳು ಪ್ರಸ್ತಾಪಿಸಿರುವಂತೆ, ಗಾಜಿನ ಮನೆ ಮತ್ತು ಉದ್ಯಾನವನ ಅಭಿವೃದ್ಧಿ ಯೋಜನೆಯನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಟ್ರಸ್ಟ್ ರಚನೆಮಾಡಿ ವಿವಿಧ ಇಲಾಖೆಗಳ ಮತ್ತು ಸಂಘಸಂಸ್ಥೆಗಳ ಸಹಕಾರ ಮತ್ತು ಸಹಭಾಗಿತ್ವ ಪಡೆದು ಉತ್ತಮ ರೀತಿಯಲ್ಲಿ ಪರಿಣಾಮಕಾರಿಯಾಗಿ ಮೇಲ್ವಿಚಾರಣೆ, ಉಸ್ತುವಾರಿ ಹಾಗೂ ದೈನಂದಿನ ನಿರ್ವಹಣಾ ಕಾರ್ಯಕ್ರಮಗಳ ಅನುಷ್ಠಾನ ಇತ್ಯಾದಿಗಳನ್ನು ಕೈಗೊಳ್ಳಬಹುದಾಗಿರುತ್ತದೆ. ಆದುದರಿಂದ ಜಿಲ್ಲಾದಿಕಾರಿಗಳು, ದಾವಣಗೆರೆ ರವರ ಅಧ್ಯಕ್ಷತೆಯಲ್ಲಿ ದಾವಣಗೆರೆ ತಾಲ್ಲೂಕಿನ ಶ್ಯಾಬನೂರು ಗ್ರಾಮದಲ್ಲಿ ಗಾಜಿನ ಮನೆ ನಿರ್ಮಾಣ ಮತ್ತು ಉದ್ಯಾನವನ ಅಭಿವೃದ್ಧಿಗಾಗಿ ಟ್ರಸ್ಟನ್ನು ಈ ಕೆಳಕಂಡ ಧ್ಯೇಯೋದ್ದೇಶಗಳೊಂದಿಗೆ ರಚಿಸಲು ಸೂಕ್ತ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

**<u>ಅ) ಟ್ರಸ್ಟ್‌ನ ಧ್ಯೇಯೋದ್ದೇಶ ಮತ್ತು ನಿಯಮಗಳು:</u>**

1. ಮಾನ್ಯ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖಾ ಅಧಿಕಾರಿಗಳನ್ನೊಳಗೊಂಡ ಟ್ರಸ್ಟ್ ಅನ್ನು ಸ್ಥಾಪಿಸುವುದು.
2. ಇನ್ನು ಮುಂದೆ ಈ ಟ್ರಸ್ಟ್‌ನ್ನು "**ದಾವಣಗೆರೆ ತಾಲ್ಲೂಕು ಶ್ಯಾಬನೂರು ಗ್ರಾಮದ ಗಾಜಿನ ಮನೆ ಮತ್ತು ಉದ್ಯಾನವನ ಅಭಿವೃದ್ಧಿ ಟ್ರಸ್ಟ್**" ಎಂದು ತಿಳಿದುಕೊಳ್ಳತಕ್ಕದ್ದು.
3. ಟ್ರಸ್ಟಿನ ಉದ್ದೇಶ ಗಾಜಿನ ಮನೆ ನಿರ್ಮಾಣ ಮತ್ತು ಉದ್ಯಾನವನ ಅಭಿವೃದ್ಧಿ ಪಡಿಸುವುದು.

**ಆ) ಟ್ರಸ್ಟ್‌ನ ಉದ್ದೇಶಗಳು:**

1. ದಾವಣಗೆರೆ ತಾಲ್ಲೂಕಿನ ಕುಂದುವಾಡ ಕೆರೆಯ ಹತ್ತಿರ ಶ್ಯಾಬನೂರು ಗ್ರಾಮದ ಸ.ನಂ.37 ರಲ್ಲಿ ಗಾಜಿನ ಮನೆ ನಿರ್ಮಿಸಿ, ಅದರ ಸುತ್ತಲಿನ ಪ್ರದೇಶವನ್ನು ಮರ ಉದ್ಯಾನವನ (Tree Garden) ಮಾದರಿಯಲ್ಲಿ ಅಭಿವೃದ್ಧಿಪಡಿಸುವುದು.
2. ಹಾಲಿ ಇರುವ ಕುಂದುವಾಡ ಕೆರೆಯ ಪಕ್ಕದಲ್ಲಿ ಗಾಜಿನ ಮನೆಯ ನಿರ್ಮಾಣದ ಜೊತೆಗೆ ಮರ ಉದ್ಯಾನವನವನ್ನು ಅಭಿವೃದ್ಧಿಪಡಿಸುವುದರ ಮೂಲಕ ಕೆರೆಯ ಸೌಂದರ್ಯವನ್ನು ಹೆಚ್ಚಿಸುವುದು.
3. ಕುಂದುವಾಡ ಕೆರೆಯ ಪ್ರದೇಶವನ್ನು ಉತ್ತಮ ಪ್ರವಾಸಿ ತಾಣವನ್ನಾಗಿ ಅಭಿವೃದ್ಧಿಪಡಿಸುವುದು.
4. ಫಲ–ಪುಷ್ಪ ಪ್ರದರ್ಶನ ಹಾಗೂ ಮನೋರಂಜನೆ ಕಾರ್ಯಕ್ರಮಗಳನ್ನು ಆಯೋಜಿಸುವುದು.
5. ಗಾಜಿನ ಮನೆ ನಿರ್ಮಾಣ ಹಾಗೂ ಸುತ್ತಮುತ್ತಲಿನ ಪ್ರದೇಶದ ಅಭಿವೃದ್ಧಿಗಾಗಿ ತೋಟಗಾರಿಕೆ ಇಲಾಖೆಯ ರಾಜ್ಯವಲಯ ಯೋಜನೆಯಲ್ಲಿ ಅಭಿವೃದ್ಧಿ ಹಾಗೂ ನಿರ್ವಹಣೆ ಮಾಡುವುದು.
6. ಜಿಲ್ಲಾ ಆಡಳಿತ, ಜಿಲ್ಲಾ ಪಂಚಾಯತ್, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮತ್ತು ಇತರೆ ಸಂಘ–ಸಂಸ್ಥೆಗಳಿಂದ ಅನುದಾನ/ವಂತಿಗೆ ಪಡೆಯುವುದು.
7. ಟ್ರಸ್ಟ್‌ನ ಉಳಿತಾಯ ಬ್ಯಾಂಕ್ ಖಾತೆಯನ್ನು ಜಿಲ್ಲಾಧಿಕಾರಿಗಳು ಹಾಗೂ ತೋಟಗಾರಿಕೆ ಉಪ ನಿರ್ದೇಶಕರ ಹೆಸರಿನಲ್ಲಿ ಜಂಟಿಯಾಗಿ ತೆರೆದು ನಿರ್ವಹಿಸುವುದು.
8. ಸದರಿ ಟ್ರಸ್ಟನ್ನು ಭಾರತ ಸರ್ಕಾರದ ಟ್ರಸ್ಟ್ ಆಕ್ಟ್‌ಗೆ ಹೊಂದಾಣಿಕೆ ಮಾಡುವುದು.
9. ಟ್ರಸ್ಟ್ ಸರ್ಕಾರದ ಅನುದಾನ ಸಂಹಿತೆಯೊಳಗೆ ಸೇರ್ಪಡೆಗೊಳಿಸುವುದು.
10. ಗಾಜಿನ ಮನೆ ಹಾಗೂ ಸುತ್ತಮುತ್ತಲಿನ ಪ್ರದೇಶದ ಅಭಿವೃದ್ಧಿಗೆ ಮೇಲ್ವಿಚಾರಣೆ ಹಾಗೂ ಅಭಿವೃದ್ಧಿ ನಂತರದ ನಿರ್ವಹಣೆಯನ್ನು ಟ್ರಸ್ಟ್ ಆಗಿಂದಾಗ್ಗೆ ಪರಿಶೀಲಿಸುವುದು ಮತ್ತು ದಿನನಿತ್ಯದ ಚಟುವಟಿಕೆಗಳ/ಕಾರ್ಯನಿರ್ವಹಣೆಯನ್ನು ಟ್ರಸ್ಟ್‌ನ ಪರವಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ದಾವಣಗೆರೆ ರವರು ನಿರ್ವಹಿಸುವುದು.
11. ಅಭಿವೃದ್ಧಿ ಹಾಗೂ ನಿರ್ವಹಣೆಗೆ ಅಗತ್ಯವಿರುವ ಸಿಬ್ಬಂದಿ ಮತ್ತು ತಾಂತ್ರಿಕ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ಪಡೆಯುವುದು.

**ಹಣಕಾಸು:**

12. ದಿನನಿತ್ಯದ ಖರ್ಚಿನ ವಿವರಗಳನ್ನು ಹಾಗೂ ಅನುದಾನದ ಬಳಕೆಯನ್ನು ನಿಯಮಾನುಸಾರ ಟ್ರಸ್ಟ್‌ನ ಸೂಚನೆಯಂತೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ದಾವಣಗೆರೆ ರವರು ನಿರ್ವಹಿಸುವುದು.
13. ಟ್ರಸ್ಟ್‌ನ ಆದಾಯದ ಮೂಲಗಳನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಪ್ರವೇಶ ಶುಲ್ಕ ಹಾಗೂ ಇತರೆ ಅಭಿವೃದ್ಧಿ ಶುಲ್ಕಗಳನ್ನು ವಿಧಿಸುವ ಅಧಿಕಾರ ಟ್ರಸ್ಟ್‌ಗೆ ಇರುತ್ತದೆ.
14. ಟ್ರಸ್ಟ್‌ನ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನ ಖಾತೆಯಲ್ಲಿಟ್ಟು ನಿರ್ವಹಿಸುವುದು. ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳ ಸಹಿ ಪಡೆದು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ದಾವಣಗೆರೆ ರವರು ನಿರ್ವಹಿಸುವುದು.
15. ಟ್ರಸ್ಟ್‌ನ ಲೆಕ್ಕಪತ್ರಗಳನ್ನು ಪ್ರತಿ ವರ್ಷ ಅಧಿಕೃತ ಲೆಕ್ಕ ಪರಿಶೋಧಕರಿಂದ ಆಡಿಟ್ ಮಾಡಿಸಬೇಕು.
16. ಟ್ರಸ್ಟ್‌ನ ಕಾರ್ಯನಿರ್ವಹಣೆಗಾಗಿ ಪ್ರತಿ ವರ್ಷವೂ ಬಜೆಟ್ ಅನ್ನು ತಯಾರಿಸಿ, ಅನುಮೋದನೆ ಪಡೆಯುವುದು.
17. ಟ್ರಸ್ಟ್‌ನ ಎಲ್ಲಾ ಚರ–ಸ್ಥಿರ ಆಸ್ತಿಗಳನ್ನು ನಿರ್ವಹಿಸುವ ಅಭಿವೃದ್ಧಿಪಡಿಸುವ ಹಾಗೂ ಅಗತ್ಯವೆಂದು ಕಂಡುಬಂದಲ್ಲಿ ಲೇಣಿ–ದೇಣಿಗಳನ್ನು ಕೈಗೊಳ್ಳುವ ಅಧಿಕಾರ ಟ್ರಸ್ಟ್‌ಗೆ ಇರುತ್ತದೆ.

**ಟ್ರಸ್ಟ್ ರಚನೆ:**

ಟ್ರಸ್ಟ್‌ನ ಕಾರ್ಯಚಟುವಟಿಕೆಗಳ ನಿರ್ವಹಣೆಗೆ ಅನುವಾಗುವಂತೆ ಈ ಕೆಳಕಂಡ ಹನ್ನೊಂದು ಜನ ಸದಸ್ಯರನ್ನೊಳಗೊಂಡ ಕಾರ್ಯಕಾರಿ ಸಮಿತಿಯನ್ನು ರಚಿಸಬಹುದಾಗಿದೆ, ವಿವರ ಈ ಕೆಳಗಿನಂತಿದೆ.

| | | |
|---|---|---|
| **1.** | ಜಿಲ್ಲಾಧಿಕಾರಿಗಳು, ದಾವಣಗೆರೆ | – ಅಧ್ಯಕ್ಷರು |
| **2.** | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಾವಣಗೆರೆ | – ಸದಸ್ಯರು |
| **3.** | ಪೋಲಿಸ್ ಅಧೀಕ್ಷಕರು, ದಾವಣಗೆರೆ | – ಸದಸ್ಯರು |
| **4.** | ಆಯುಕ್ತರು, ಮಹಾನಗರಪಾಲಿಕೆ, ದಾವಣಗೆರೆ | – ಸದಸ್ಯರು |
| **5.** | ಕಾರ್ಯಪಾಲಕ ಅಭಿಯಂತರರು,ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ದಾವಣಗೆರೆ | –ಸದಸ್ಯರು |
| **6.** | ತೋಟಗಾರಿಕೆ ಜಂಟಿ ನಿರ್ದೇಶಕರು, ಪಾರ್ಕ್ಸ್ & ಗಾರ್ಡನ್, ಲಾಲ್‌ಬಾಗ್, ಬೆಂಗಳೂರು | –ವಿಶೇಷ ಆಹ್ವಾನಿತರು. |
| **7.** | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ದಾವಣಗೆರೆ | –ಸದಸ್ಯರು |
| **8.** | ಸಹಾಯಕ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ದಾವಣಗೆರೆ | – ಸದಸ್ಯರು |
| **9.** | ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ದಾವಣಗೆರೆ | –ಸದಸ್ಯ ಕಾರ್ಯದರ್ಶಿ |
| **10.** | ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ಜಿಪಂ) ದಾವಣಗೆರೆ | – ಸದಸ್ಯರು |
| **11.** | ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ದಾವಣಗೆರೆ | – ಸದಸ್ಯರು. |

**ಟ್ರಸ್ಟಿನ ಕಾರ್ಯನಿರ್ವಹಣೆ:**

1. ಟ್ರಸ್ಟ್‌ನ ಕಾರ್ಯನಿರ್ವಹಣೆಗೆ ಅಗತ್ಯವಾದ ಉಪಸಮಿತಿಗಳನ್ನು ರಚಿಸಿಕೊಳ್ಳುವ ಅಧಿಕಾರ ಟ್ರಸ್ಟ್ ಹೊಂದಿರುತ್ತದೆ.
2. ವರ್ಷದಲ್ಲಿ ಕನಿಷ್ಠ ನಾಲ್ಕು ಸಲ ಟ್ರಸ್ಟ್‌ನ ಸಭೆ ನಡೆಸುವುದು.
3. ಅಗತ್ಯವೆಂದು ಕಂಡುಬಂದಾಗ, ಅಧ್ಯಕ್ಷರು ಟ್ರಸ್ಟ್‌ನ ಸಭೆಗೆ ತಜ್ಞರನ್ನು ವಿಶೇಷ ಪ್ರತಿನಿಧಿಯಾಗಿ ಕರೆಯುವ ಅಧಿಕಾರ ಹೊಂದಿರುತ್ತಾರೆ.
4. ಸಭೆಯ ಕೋರಂ ಮೂರನೇ ಒಂದರಷ್ಟು ಆಗಿರಬೇಕು
5. ಟ್ರಸ್ಟ್‌ನ ಕಾರ್ಯನಿರ್ವಹಣೆಗೆ ಅಗತ್ಯವಾದ ಸಿಬ್ಬಂದಿವರ್ಗವನ್ನು ನಿಯಮಾನುಸಾರ ಸೃಷ್ಠಿಸುವ, ರದ್ದುಗೊಳಿಸುವ, ನೇಮಕ ಮಾಡುವ, ಸೇವಾ ನಿಯಮಗಳನ್ನು ನಿಗಧಿಪಡಿಸುವ ಹಾಗೂ ನೌಕರ ವರ್ಗದ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳುವ ಅಧಿಕಾರವನ್ನು ಟ್ರಸ್ಟ್ ಹೊಂದಿರತಕ್ಕದ್ದು.
6. ಟ್ರಸ್ಟ್‌ನ ಮೂಲ ಧ್ಯೇಯೋದ್ದೇಶಗಳಿಗೆ ಭಂಗವಾಗದಂತೆ ಅಂಗ ರಚನೆ, ಕಾಲಕಾಲಕ್ಕೆ ಅಗತ್ಯವೆನಿಸುವ ತಿದ್ದುಪಡಿಸಿ ಮಾಡುವ ಉಪ ವಿಧಿಗಳನ್ನು ಸೇರ್ಪಡೆ ಮಾಡುವ ಅಧಿಕಾರವು ಟ್ರಸ್ಟ್‌ಗೆ ಇರತಕ್ಕದ್ದು.
7. ಟ್ರಸ್ಟ್‌ನ ಧ್ಯೇಯೋದ್ದೇಶಗಳಿಗೆ ವಿರುದ್ಧವಾಗಿ ವರ್ತಿಸುವ, ಪ್ರಚಾರ ಮಾಡುವ ಟ್ರಸ್ಟಿಗಳನ್ನು ಈ ಟ್ರಸ್ಟಿನಿಂದ ಅಮಾನುತ್ತುಗೊಳಿಸುವ ಮತ್ತು ಅಂತಹವರ ಟ್ರಸ್ಟಿಶಿಪ್ ಅನ್ನು ರದ್ದುಗೊಳಿಸುವ ಅಧಿಕಾರ ಈ ಟ್ರಸ್ಟ್‌ಗೆ ಇರತಕ್ಕದ್ದು.
8. ಈ ಮೂಲಕ ರಚಿಸಿದ ಈ ಟ್ರಸ್ಟಿನ ಪತ್ರದಲ್ಲಿ ಸ್ಪಷ್ಟವಾಗಿ ಉಪಬಂಧಿಸಿಲ್ಲದ ವಿಷಯಗಳಿಗೆ ಸಂಬಂಧಪಟ್ಟಂತೆ ಭಾರತದ ಟ್ರಸ್ಟ್ ಅಧಿನಿಯಮದ ಉಪನಿಬಂಧಗಳನ್ನು ಅನ್ವಯಿಸಿ ಅನುಸರಿಸಬಹುದು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆರವರ ಅಧ್ಯಕ್ಷತೆಯಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕಿನ ಶ್ಯಾಬನೂರು ಗ್ರಾಮದ ಬಳಿಯಿರುವ ಕುಂದುವಾಡ ಕೆರೆಯ ಹತ್ತಿರ ಸರ್ವೆ ನಂ.37ರಲ್ಲಿ ಗಾಜಿನ ಮನೆ ನಿರ್ಮಾಣ ಮತ್ತು ಸುತ್ತಮುತ್ತ ಪ್ರದೇಶದಲ್ಲಿ ಹೊಸದಾಗಿ ಉದ್ಯಾನವನ ಅಭಿವೃದ್ಧಿಗಾಗಿ ಧ್ಯೇಯೋದ್ದೇಶಗಳು ಹಾಗು ಕಾರ್ಯ ವೈಖರಿಗಳೊಂದಿಗೆ ಈ ಕೆಳಕಂಡಂತೆ ಟ್ರಸ್ಟ್ ರಚಿಸಿ ಆದೇಶಿಸಲಾಗಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ | – ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಾವಣಗೆರೆ ಜಿಲ್ಲಾ ಪಂಚಾಯತ್, ದಾವಣಗೆರೆ. | – ಸದಸ್ಯರು |
| 3. | ಪೋಲಿಸ್ ಅಧೀಕ್ಷಕರು, ದಾವಣಗೆರೆ | – ಸದಸ್ಯರು |
| 4. | ಆಯುಕ್ತರು, ಮಹಾನಗರಪಾಲಿಕೆ, ದಾವಣಗೆರೆ | – ಸದಸ್ಯರು |
| 5. | ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ದಾವಣಗೆರೆ | –ಸದಸ್ಯರು |
| 6. | ತೋಟಗಾರಿಕೆ ಜಂಟಿ ನಿರ್ದೇಶಕರು, ಪಾರ್ಕ್ಸ್ & ಗಾರ್ಡನ್, ಲಾಲ್‌ಬಾಗ್, ಬೆಂಗಳೂರು | –ವಿಶೇಷ ಆಹ್ವಾನಿತರು. |
| 7. | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ದಾವಣಗೆರೆ | –ಸದಸ್ಯರು |
| 8. | ಸಹಾಯಕ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ದಾವಣಗೆರೆ | – ಸದಸ್ಯರು |
| 9. | ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ದಾವಣಗೆರೆ | –ಸದಸ್ಯ ಕಾರ್ಯದರ್ಶಿ |
| 10. | ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು (ಜಿಪಂ) ದಾವಣಗೆರೆ | – ಸದಸ್ಯರು |
| 11. | ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ದಾವಣಗೆರೆ | – ಸದಸ್ಯರು. |

**ಅ) ಟ್ರಸ್ಟ್‌ನ ಧ್ಯೇಯೋದ್ದೇಶ ಮತ್ತು ನಿಯಮಗಳು:**

1. ಮಾನ್ಯ ಜಿಲ್ಲಾಧಿಕಾರಿಗಳು, ದಾವಣಗೆರೆ ಇವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖಾ ಅಧಿಕಾರಿಗಳನ್ನೊಳಗೊಂಡ ಟ್ರಸ್ಟ್ ಅನ್ನು ಸ್ಥಾಪಿಸುವುದು.
2. ಇನ್ನು ಮುಂದೆ ಈ ಟ್ರಸ್ಟ್‌ನ್ನು "ದಾವಣಗೆರೆ ತಾಲ್ಲೂಕು ಶ್ಯಾಬನೂರು ಗ್ರಾಮದ ಗಾಜಿನ ಮನೆ ಮತ್ತು ಉದ್ಯಾನವನ ಅಭಿವೃದ್ಧಿ ಟ್ರಸ್ಟ್" ಎಂದು ತಿಳಿದುಕೊಳ್ಳತಕ್ಕದ್ದು.
3. ಟ್ರಸ್ಟಿನ ಉದ್ದೇಶ ಗಾಜಿನ ಮನೆ ನಿರ್ಮಾಣ ಮತ್ತು ಉದ್ಯಾನವನ ಅಭಿವೃದ್ಧಿ ಪಡಿಸುವುದು.

**ಆ) ಟ್ರಸ್ಟ್‌ನ ಉದ್ದೇಶಗಳು:**

1. ದಾವಣಗೆರೆ ತಾಲ್ಲೂಕಿನ ಕುಂದುವಾಡ ಕೆರೆಯ ಹತ್ತಿರ ಶ್ಯಾಬನೂರು ಗ್ರಾಮದ ಸ.ನಂ.37 ರಲ್ಲಿ ಗಾಜಿನ ಮನೆ ನಿರ್ಮಿಸಿ, ಅದರ ಸುತ್ತಲಿನ ಪ್ರದೇಶವನ್ನು ಮರ ಉದ್ಯಾನವನ (Tree Garden) ಮಾದರಿಯಲ್ಲಿ ಅಭಿವೃದ್ಧಿಪಡಿಸುವುದು.
2. ಹಾಲಿ ಇರುವ ಕುಂದುವಾಡ ಕೆರೆಯ ಪಕ್ಕದಲ್ಲಿ ಗಾಜಿನ ಮನೆಯ ನಿರ್ಮಾಣದ ಜೊತೆಗೆ ಮರ ಉದ್ಯಾನವನವನ್ನು ಅಭಿವೃದ್ಧಿಪಡಿಸುವುದರ ಮೂಲಕ ಕೆರೆಯ ಸೌಂದರ್ಯವನ್ನು ಹೆಚ್ಚಿಸುವುದು.

3. ಕುಂದುವಾಡ ಕೆರೆಯ ಪ್ರದೇಶವನ್ನು ಉತ್ತಮ ಪ್ರವಾಸಿ ತಾಣವನ್ನಾಗಿ ಅಭಿವೃದ್ಧಿಪಡಿಸುವುದು.
4. ಫಲ-ಪುಷ್ಪ ಪ್ರದರ್ಶನ ಹಾಗೂ ಮನೋರಂಜನೆ ಕಾರ್ಯಕ್ರಮಗಳನ್ನು ಆಯೋಜಿಸುವುದು.
5. ಗಾಜಿನ ಮನೆ ನಿರ್ಮಾಣ ಹಾಗೂ ಸುತ್ತಮುತ್ತಲಿನ ಪ್ರದೇಶದ ಅಭಿವೃದ್ಧಿಗಾಗಿ ತೋಟಗಾರಿಕೆ ಇಲಾಖೆಯ ರಾಜ್ಯವಲಯ ಯೋಜನೆಯಲ್ಲಿ ಅಭಿವೃದ್ಧಿ ಹಾಗೂ ನಿರ್ವಹಣೆ ಮಾಡುವುದು.
6. ಜಿಲ್ಲಾ ಆಡಳಿತ, ಜಿಲ್ಲಾ ಪಂಚಾಯತ್, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮತ್ತು ಇತರೆ ಸಂಘ-ಸಂಸ್ಥೆಗಳಿಂದ ಅನುದಾನ/ವಂತಿಗೆ ಪಡೆಯುವುದು.
7. ಟ್ರಸ್ಟ್‌ನ ಉಳಿತಾಯ ಬ್ಯಾಂಕ್ ಖಾತೆಯನ್ನು ಜಿಲ್ಲಾಧಿಕಾರಿಗಳು ಹಾಗೂ ತೋಟಗಾರಿಕೆ ಉಪ ನಿರ್ದೇಶಕರ ಹೆಸರಿನಲ್ಲಿ ಜಂಟಿಯಾಗಿ ತೆರೆದು ನಿರ್ವಹಿಸುವುದು.
8. ಸದರಿ ಟ್ರಸ್ಟನ್ನು ಭಾರತ ಸರ್ಕಾರದ ಟ್ರಸ್ಟ್ ಆಕ್ಟ್‌ಗೆ ಹೊಂದಾಣಿಕೆ ಮಾಡುವುದು.
9. ಟ್ರಸ್ಟ್ ಸರ್ಕಾರದ ಅನುದಾನ ಸಂಹಿತೆಯೊಳಗೆ ಸೇರ್ಪಡೆಗೊಳಿಸುವುದು.
10. ಗಾಜಿನ ಮನೆ ಹಾಗೂ ಸುತ್ತಮುತ್ತಲಿನ ಪ್ರದೇಶದ ಅಭಿವೃದ್ಧಿಗೆ ಮೇಲ್ವಿಚಾರಣೆ ಹಾಗೂ ಅಭಿವೃದ್ಧಿ ನಂತರದ ನಿರ್ವಹಣೆಯನ್ನು ಟ್ರಸ್ಟ್ ಆಗಿಂದಾಗ್ಗೆ ಪರಿಶೀಲಿಸುವುದು ಮತ್ತು ದಿನನಿತ್ಯದ ಚಟುವಟಿಕೆಗಳ/ಕಾರ್ಯನಿರ್ವಹಣೆಯನ್ನು ಟ್ರಸ್ಟ್‌ನ ಪರವಾಗಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ದಾವಣಗೆರೆ ರವರು ನಿರ್ವಹಿಸುವುದು.
11. ಅಭಿವೃದ್ಧಿ ಹಾಗೂ ನಿರ್ವಹಣೆಗೆ ಅಗತ್ಯವಿರುವ ಸಿಬ್ಬಂದಿ ಮತ್ತು ತಾಂತ್ರಿಕ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ಪಡೆಯುವುದು.

<u>ಹಣಕಾಸು:</u>

12. ದಿನನಿತ್ಯದ ಖರ್ಚಿನ ವಿವರಗಳನ್ನು ಹಾಗೂ ಅನುದಾನದ ಬಳಕೆಯನ್ನು ನಿಯಮಾನುಸಾರ ಟ್ರಸ್ಟ್‌ನ ಸೂಚನೆಯಂತೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ದಾವಣಗೆರೆ ರವರು ನಿರ್ವಹಿಸುವುದು.
13. ಟ್ರಸ್ಟ್‌ನ ಆದಾಯದ ಮೂಲಗಳನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಪ್ರವೇಶ ಶುಲ್ಕ ಹಾಗೂ ಇತರೆ ಅಭಿವೃದ್ಧಿ ಶುಲ್ಕಗಳನ್ನು ವಿಧಿಸುವ ಅಧಿಕಾರ ಟ್ರಸ್ಟ್‌ಗೆ ಇರುತ್ತದೆ.
14. ಟ್ರಸ್ಟ್‌ನ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನ ಖಾತೆಯಲ್ಲಿಟ್ಟು ನಿರ್ವಹಿಸುವುದು. ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳ ಸಹಿ ಪಡೆದು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಪಂ) ದಾವಣಗೆರೆ ರವರು ನಿರ್ವಹಿಸುವುದು.
15. ಟ್ರಸ್ಟ್‌ನ ಲೆಕ್ಕಪತ್ರಗಳನ್ನು ಪ್ರತಿ ವರ್ಷ ಅಧಿಕೃತ ಲೆಕ್ಕ ಪರಿಶೋಧಕರಿಂದ ಆಡಿಟ್ ಮಾಡಿಸಬೇಕು.
16. ಟ್ರಸ್ಟ್‌ನ ಕಾರ್ಯನಿರ್ವಹಣೆಗಾಗಿ ಪ್ರತಿ ವರ್ಷವೂ ಬಜೆಟ್ ಅನ್ನು ತಯಾರಿಸಿ, ಅನುಮೋದನೆ ಪಡೆಯುವುದು.
17. ಟ್ರಸ್ಟ್‌ನ ಎಲ್ಲಾ ಚರ-ಸ್ಥಿರ ಆಸ್ತಿಗಳನ್ನು ನಿರ್ವಹಿಸುವ ಅಭಿವೃದ್ಧಿಪಡಿಸುವ ಹಾಗೂ ಅಗತ್ಯವೆಂದು ಕಂಡುಬಂದಲ್ಲಿ ಲೇಣಿ-ದೇಣಿಗಳನ್ನು ಕೈಗೊಳ್ಳುವ ಅಧಿಕಾರ ಟ್ರಸ್ಟ್‌ಗೆ ಇರುತ್ತದೆ.

<u>ಟ್ರಸ್ಟಿನ ಕಾರ್ಯನಿರ್ವಹಣೆ:</u>

1. ಟ್ರಸ್ಟ್‌ನ ಕಾರ್ಯನಿರ್ವಹಣೆಗೆ ಅಗತ್ಯವಾದ ಉಪಸಮಿತಿಗಳನ್ನು ರಚಿಸಿಕೊಳ್ಳುವ ಅಧಿಕಾರ ಟ್ರಸ್ಟ್ ಹೊಂದಿರುತ್ತದೆ.
2. ವರ್ಷದಲ್ಲಿ ಕನಿಷ್ಠ ನಾಲ್ಕು ಸಲ ಟ್ರಸ್ಟ್‌ನ ಸಭೆ ನಡೆಸುವುದು.
3. ಅಗತ್ಯವೆಂದು ಕಂಡುಬಂದಾಗ, ಅಧ್ಯಕ್ಷರು ಟ್ರಸ್ಟ್‌ನ ಸಭೆಗೆ ತಜ್ಞರನ್ನು ವಿಶೇಷ ಪ್ರತಿನಿಧಿಯಾಗಿ ಕರೆಯುವ ಅಧಿಕಾರ ಹೊಂದಿರುತ್ತಾರೆ.
4. ಸಭೆಯ ಕೋರಂ ಮೂರನೇ ಒಂದರಷ್ಟು ಆಗಿರಬೇಕು
5. ಟ್ರಸ್ಟ್‌ನ ಕಾರ್ಯನಿರ್ವಹಣೆಗೆ ಅಗತ್ಯವಾದ ಸಿಬ್ಬಂದಿವರ್ಗವನ್ನು ನಿಯಮಾನುಸಾರ ಸೃಷ್ಠಿಸುವ, ರದ್ದುಗೊಳಿಸುವ, ನೇಮಕ ಮಾಡುವ, ಸೇವಾ ನಿಯಮಗಳನ್ನು ನಿಗಧಿಪಡಿಸುವ ಹಾಗೂ ನೌಕರ ವರ್ಗದ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳುವ ಅಧಿಕಾರವನ್ನು ಟ್ರಸ್ಟ್ ಹೊಂದಿರತಕ್ಕದ್ದು.
6. ಟ್ರಸ್ಟ್‌ನ ಮೂಲ ಧ್ಯೇಯೋದ್ದೇಶಗಳಿಗೆ ಭಂಗವಾಗದಂತೆ ಅಂಗ ರಚನೆ, ಕಾಲಕಾಲಕ್ಕೆ ಅಗತ್ಯವೆನಿಸುವ ತಿದ್ದುಪಡಿಸಿ ಮಾಡುವ ಉಪ ವಿಧಿಗಳನ್ನು ಸೇರ್ಪಡೆ ಮಾಡುವ ಅಧಿಕಾರವು ಟ್ರಸ್ಟ್‌ಗೆ ಇರತಕ್ಕದ್ದು.
7. ಟ್ರಸ್ಟ್‌ನ ಧ್ಯೇಯೋದ್ದೇಶಗಳಿಗೆ ವಿರುದ್ಧವಾಗಿ ವರ್ತಿಸುವ, ಪ್ರಚಾರ ಮಾಡುವ ಟ್ರಸ್ಟಿಗಳನ್ನು ಈ ಟ್ರಸ್ಟಿನಿಂದ ಅಮಾನುತ್ತುಗೊಳಿಸುವ ಮತ್ತು ಅಂತಹವರ ಟ್ರಸ್ಟಿಶಿಪ್ ಅನ್ನು ರದ್ದುಗೊಳಿಸುವ ಅಧಿಕಾರ ಈ ಟ್ರಸ್ಟ್‌ಗೆ ಇರತಕ್ಕದ್ದು.
8. ಈ ಮೂಲಕ ರಚಿಸಿದ ಈ ಟ್ರಸ್ಟಿನ ಪತ್ರದಲ್ಲಿ ಸ್ಪಷ್ಟವಾಗಿ ಉಪಬಂಧಿಸಿಲ್ಲದ ವಿಷಯಗಳಿಗೆ ಸಂಬಂಧಪಟ್ಟಂತೆ ಭಾರತದ ಟ್ರಸ್ಟ್ ಅಧಿನಿಯಮದ ಉಪನಿಬಂಧಗಳನ್ನು ಅನ್ವಯಿಸಿ ಅನುಸರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

**PR. 293**

**SC. 25**

## ಶಿಕ್ಷಣ ಸಚಿವಾಲಯ

**ವಿಷಯ:** ತಾಂತ್ರಿಕ ಶಿಕ್ಷಣ ಇಲಾಖೆಯ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಡಿಪ್ಲೊಮಾ ಪರೀಕ್ಷೆಗಳಲ್ಲಿ ಮಾಲ್‌ಪ್ರಾಕ್ಟೀಸ್ ಪ್ರಕರಣಗಳಲ್ಲಿ ತೊಡಗುವ ಅಧಿಕಾರಿಗಳು, ಉಪನ್ಯಾಸಕರು ಮತ್ತು ಸಿಬ್ಬಂದಿ ವರ್ಗದವರ ವಿರುದ್ಧ ಶಿಕ್ಷೆ ಮತ್ತು ದಂಡ ವಿಧಿಸುವ ಕುರಿತು.

**ಓದಲಾಗಿದೆ:** 01. ಸರ್ಕಾರದ ಆದೇಶಸಂಖ್ಯೆ: ಇಡಿ 96 ಟಿಪಿಇ 2008, ದಿನಾಂಕ: 23.06.2008.

02.ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರಸಂಖ್ಯೆ: ಬಿಟಿಇ 02 ಇಸಿಎಸ್ 1 2012, ದಿನಾಂಕ: 01.02.2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕ್ರಮಸಂಖ್ಯೆ (1)ರ ಆದೇಶದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ, ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಡಿಪ್ಲೊಮಾ ಪರೀಕ್ಷೆಗಳಲ್ಲಿ ಕರ್ತವ್ಯಲೋಪ ಎಸಗುವ ಮತ್ತು ಮಾಲ್‌ಪ್ರಾಕ್ಟೀಸ್‌ನಲ್ಲಿ ಭಾಗಿಯಾಗುವ ಅಧಿಕಾರಿಗಳು/ಉಪನ್ಯಾಸಕರು/ಸಿಬ್ಬಂದಿ ವರ್ಗದವರ ವಿರುದ್ಧ ಸೂಕ್ತ ಶಿಸ್ತುಕ್ರಮ ಕೈಗೊಳ್ಳುವ ಮತ್ತು ದಂಡ ವಿಧಿಸುವ ಬಗ್ಗೆ ಸರ್ಕಾರವು ಆದೇಶವನ್ನು ಹೊರಡಿಸಿರುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಂತೆ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ಕ್ರಮವಹಿಸುತ್ತಿದ್ದು, ಪ್ರಸ್ತುತ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯಲ್ಲಿ ಪರೀಕ್ಷಾ ಕಾರ್ಯಗಳ ಸಮರ್ಪಕ ನಿರ್ವಹಣೆ ಮತ್ತು ಅಭಿವೃದ್ಧಿಗೋಸ್ಕರ ಹೊಸ ತಂತ್ರಾಂಶವನ್ನು ಅಳವಡಿಸಿಕೊಂಡಿರುವ ಕಾರಣ ಪರೀಕ್ಷಾ ಕಾರ್ಯ ವಿಧಾನಗಳಲ್ಲಿ ಆಮೂಲಾಗ್ರ ಬದಲಾವಣೆಗಳಾಗಿದ್ದು, ಎಲ್ಲಾ ಕಾರ್ಯಗಳನ್ನು ತ್ವರಿತ ಗತಿಯಲ್ಲಿ ನಿರ್ವಹಿಸಲು ಸಹಕಾರಿಯಾಗಿದ್ದು, ಈ ಹೊಸ ತಂತ್ರಾಂಶದಿಂದ ಪರೀಕ್ಷಾ ಕಾರ್ಯವಿಧಾನಗಳಲ್ಲಿ ಸಾಕಷ್ಟು ಮಾರ್ಪಾಡುಗಳಾಗಿದ್ದು, ಪ್ರಸ್ತುತ ಪರೀಕ್ಷಾ ಕಾರ್ಯವಿಧಾನಗಳಲ್ಲಿ ಲೋಪ ಎಸಗುವ ಮತ್ತು ಮಾಲ್‌ಪ್ರಾಕ್ಟೀಸ್‌ನಲ್ಲಿ ಭಾಗಿಯಾಗುವ ಅಧಿಕಾರಿಗಳು/ಉಪನ್ಯಾಸಕರು/ಸಿಬ್ಬಂದಿ ವರ್ಗದವರ ವಿರುದ್ಧ ಸೂಕ್ತ ಶಿಸ್ತುಕ್ರಮ ಕೈಗೊಳ್ಳಲು ಪ್ರಸ್ತುತ ಜಾರಿಯಲ್ಲಿರುವ ಸರ್ಕಾರಿ ಆದೇಶಗಳ ಜೊತೆಗೆ ಮಂಡಳಿಯ ಹೊಸ ಕಾರ್ಯವಿಧಾನಗಳಿಗೆ ಹೊಂದಿಕೆಯಾಗುವ ಅಂಶಗಳಿರುವ ಪರಿಷ್ಕೃತ ಸರ್ಕಾರಿ ಆದೇಶದ ಅವಶ್ಯಕತೆಯಿರುವುದಾಗಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ತಿಳಿಸಿ, ಈ ಬಗ್ಗೆ ಕೆಲವು ಹೊಸ ವಿವರಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಈ ಬಗ್ಗೆ ಈಗಾಗಲೇ ಅಸ್ತಿತ್ವದಲ್ಲಿರುವ ಸರ್ಕಾರದ ಆದೇಶಸಂಖ್ಯೆ: ಇಡಿ 96 ಟಿಪಿಇ 2008, ದಿನಾಂಕ: 23.06.2008ರ ಆದೇಶವನ್ನು ಚಾಲ್ತಿಯಲ್ಲಿಟ್ಟು ಹೊಸ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ತಾಂತ್ರಿಕ ಶಿಕ್ಷಣ ನಿರ್ದೇಶಕರು ಕೋರಿರುತ್ತಾರೆ.

ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಡಿಪ್ಲೊಮಾ ಪರೀಕ್ಷೆಗಳಲ್ಲಿ ಮಾಲ್‌ಪ್ರಾಕ್ಟೀಸ್ ಪ್ರಕರಣಗಳಲ್ಲಿ ತೊಡಗುವ ಅಧಿಕಾರಿಗಳು, ಉಪನ್ಯಾಸಕರು ಮತ್ತು ಸಿಬ್ಬಂದಿ ವರ್ಗದವರ ವಿರುದ್ಧ ಶಿಕ್ಷೆ ಮತ್ತು ದಂಡ ವಿಧಿಸುವ ಕುರಿತು ಈಗಾಗಲೇ ಅಸ್ತಿತ್ವದಲ್ಲಿರುವ ಸರ್ಕಾರದ ಆದೇಶಸಂಖ್ಯೆ: ಇಡಿ 96 ಟಿಪಿಇ 2008, ದಿನಾಂಕ: 23.06.2008ರ ಜೊತೆಗೆ ಮತ್ತಷ್ಟು ಹೊಸ ಅಂಶಗಳನ್ನು ಸೇರಿಸಿ, ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 57 ಟಿಪಿಇ 2013 ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ತಾಂತ್ರಿಕ ಶಿಕ್ಷಣ ಇಲಾಖೆಯ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಡಿಪ್ಲೊಮಾ ಪರೀಕ್ಷೆಗಳಲ್ಲಿ ಮಾಲ್‌ಪ್ರಾಕ್ಟೀಸ್ ಪ್ರಕರಣಗಳಲ್ಲಿ ತೊಡಗುವ ಅಧಿಕಾರಿಗಳು, ಉಪನ್ಯಾಸಕರು ಮತ್ತು ಸಿಬ್ಬಂದಿ ವರ್ಗದವರ ವಿರುದ್ಧ ಶಿಕ್ಷೆ ಮತ್ತು ದಂಡ ವಿಧಿಸುವ ಕುರಿತು ಈಗಾಗಲೇ ಅಸ್ತಿತ್ವದಲ್ಲಿರುವ ಸರ್ಕಾರದ ಆದೇಶಸಂಖ್ಯೆ: ಇಡಿ 96 ಟಿಪಿಇ 2008, ದಿನಾಂಕ: 23.06.2008ರ ಜೊತೆಗೆ ಪ್ರಸ್ತುತ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ಪರೀಕ್ಷಾ ಕಾರ್ಯಗಳ ಸಮರ್ಪಕ ನಿರ್ವಹಣೆ ಮತ್ತು ಅಭಿವೃದ್ಧಿಗೋಸ್ಕರ ಹೊಸ ತಂತ್ರಾಂಶವನ್ನು ಅಳವಡಿಸಿಕೊಂಡಿರುವ ಹಿನ್ನೆಲೆಯಲ್ಲಿ ಈ ಹಿಂದಿನ ಆದೇಶದಲ್ಲಿದ್ದ ಅಂಶಗಳ ಜೊತೆಗೆ ಪ್ರಸ್ತುತ ಆದೇಶದ ಅನುಬಂಧದಲ್ಲಿ ತಿಳಿಸಿರುವ ಹೊಸ ಅಂಶಗಳನ್ನು ಸೇರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ನಾಗಭೂಷಣ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**ಸರ್ಕಾರಿ ಆದೇಶ ಸಂಖ್ಯೆ: ಇಡಿ 57 ಟಿಪಿಇ 2013 ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2015.**

**ಅನುಬಂಧ**

| ಕ್ರ. ಸಂ. | ತಪ್ಪುಗಳ ವಿವರ | ಶಿಕ್ಷೆ/ದಂಡ |
|---|---|---|
| (1) | (2) | (3) |
| 1 | ಉತ್ತರಪತ್ರಿಕೆಯ ಒಳಪುಟಗಳಲ್ಲಿ ಮುಖ್ಯಪ್ರಶ್ನೆ ಹಾಗೂ ಉಪ ಮುಖ್ಯ ಪ್ರಶ್ನೆಗಳಿಗೆ ನೀಡಲಾದ ಅಂಕಗಳನ್ನು ಉತ್ತರಪತ್ರಿಕೆಯ ಮುಖಪುಟದಲ್ಲಿ ಯಥಾವತ್ತಾಗಿ ವರ್ಗಾಯಿಸದಿರುವುದು ಅಥವಾ ಉದ್ದೇಶಪೂರ್ವಕವಾಗಿ ವ್ಯತ್ಯಯವಾಗಿ ವರ್ಗಾಯಿಸುವುದು. | ಮೌಲ್ಯಮಾಪಕರಿಗೆ ರೂ.1,000/- ದಂಡ ವಿಧಿಸುವುದು. |
| 2 | ಉತ್ತರಪತ್ರಿಕೆಯ ಮುಖಪುಟದ ಟ್ಯಾಬ್ಯುಲರ್ ಕಾಲಂನಲ್ಲಿ ತಪ್ಪಾಗಿ ಕೂಡುವುದು ಮತ್ತು ಅದೇ ಅಂಕಗಳನ್ನು ಮಾರ್ಕ್ಸ್ ಲಿಸ್ಟ್‌ಗೆ ನಮೂದಿಸುವುದು. | ಮೌಲ್ಯಮಾಪಕರಿಗೆ ರೂ.1,000/- ದಂಡ ವಿಧಿಸುವುದು. |

| ಕ್ರ. ಸಂ. | ತಪ್ಪುಗಳ ವಿವರ | ಶಿಕ್ಷೆ/ದಂಡ |
|---|---|---|
| (1) | (2) | (3) |
| 3 | ಪ್ರಶ್ನೆಪತ್ರಿಕೆ ರಚನಕಾರರು ನಿಗದಿತ ಸಮಯದಲ್ಲಿ Sheme of Valuation and Model Answer ಗಳನ್ನು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಗೆ ಕಳುಹಿಸದೇ ಇರುವುದು. | ನಿಗದಿತ ಸಮಯದ ನಂತರ ಒಂದು ದಿನಕ್ಕೆ ರೂ.100/-ರಂತೆ ದಂಡ ವಿಧಿಸುವುದು ಪ್ರಶ್ನೆಪತ್ರಿಕೆ ರಚನಕಾರರಿಗೆ |
| 4 | ಪರೀಕ್ಷಾ ಕಾರ್ಯಗಳಾದ ಥಿಯರಿ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮತ್ತು ಮರುಮೌಲ್ಯಮಾಪನ ಕಾರ್ಯಗಳಿಗೆ ಗೈರುಹಾಜರಾಗುವ ಮಾಲ್ಯಮಾಪಕರುಗಳಿಗೆ. | ಗೈರುಹಾಜರಾದ ಅವಧಿಯ ಸಂಬಳವನ್ನು ಕಟಾಯಿಸುವುದು, ಸಂಬಳರಹಿತ ರಜೆ ಎಂದು ಘೋಷಿಸುವುದು ಹಾಗೂ ಗೈರುಹಾಜರಿ ಎಂದು ಪರಿಗಣಿಸುವುದು. |
| 5 | ಥಿಯರಿ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯಕ್ಕೆ ಕಾರ್ಯವರದಿ ಮಾಡಿಕೊಂಡು ಹಾಜರಾಗಿ ಮೌಲ್ಯಮಾಪನದ ಮಧ್ಯದ ಅವಧಿಯಲ್ಲಿ ಅನಧಿಕೃತವಾಗಿ ಗೈರುಹಾಜರಾಗುವುದು. | ಗೈರುಹಾಜರಾದ ಅವಧಿಯ ಸಂಬಳ ಕಟಾಯಿಸುವುದು ಮತ್ತು ಸಂಬಳರಹಿತ ರಜೆ ಎಂದು ಘೋಷಿಸುವುದು/ಅನಧಿಕೃತ ಗೈರುಹಾಜರಿ ಎಂದು ಪರಿಗಣಿಸುವುದು. |
| 6 | ಮೌಲ್ಯಮಾಪನ ಕಾರ್ಯಕ್ಕೆ ಹಾಜರಾಗಿ ಪ್ರತಿ ದಿನಕ್ಕೆ ನಿಗದಿಪಡಿಸಿದ ಸಂಖ್ಯೆ ಉತ್ತರಪತ್ರಿಕೆಗಳನ್ನು ಮೌಲ್ಯಮಾಪನ ಮಾಡದೇ ಇರುವ ಮೌಲ್ಯಮಾಪಕರಿಗೆ. | ಸಿಬ್ಬಂದಿ ದುರಾಚಾರ ಸಮಿತಿಯಿಂದ ಕರ್ತವ್ಯಲೋಪ ಎಸಗಿದ ಬಗ್ಗೆ ವಿಚಾರಣೆ. |
| 7 | ಉತ್ತರ ಪತ್ರಿಕೆಗಳ ಮೌಲ್ಯಮಾಪನ ಸಮಯದಲ್ಲಿ ಉತ್ತರ ಪತ್ರಿಕೆಯಲ್ಲಿ ಮೌಲ್ಯಮಾಪಕರೇ/ ರಿವ್ಯೂವರ್‌ಗಳೇ ಮೌಲ್ಯಮಾಪನ ಮಾಡಿ ಉತ್ತರಗಳನ್ನು ಬರೆದಿದ್ದಲ್ಲಿ ಅಥವಾ ಸೇರಿಸಿದ್ದಲ್ಲಿ | ರೂ.5,000/- ದಂಡ ಮತ್ತು ಇಲಾಖಾ ತನಿಖೆ, ಮೌಲ್ಯಮಾಪಕರು/ರಿವ್ಯೂವರ್ - ಇವರಿಗೆ. |
| 8 | ಮೌಲ್ಯಮಾಪನ ಸಮಯದಲ್ಲಿ ಅಥವಾ (ಥಿಯರಿ/ಪ್ರಾಯೋಗಿಕ) ಪರೀಕ್ಷೆಯ ಸಮಯದಲ್ಲಿ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯಲ್ಲಿ ಯಾವುದೇ ಲೋಪದೋಷಗಳು ಅಥವಾ ಶಂಕಿತ ಮಾಲ್ ಪ್ರಾಕ್ಟೀಸ್ ಪ್ರಕರಣಗಳು ಕಂಡುಬಂದಲ್ಲಿ ಅದನ್ನು ಮುಂದಿನ ಕ್ರಮಕ್ಕಾಗಿ ಮೇಲಧಿಕಾರಿಗಳ ಗಮನಕ್ಕೆ ತರದೇ ಇರುವುದು. | ಮಾಲ್ಯಮಾಪಕರುಗಳಿಗೆ ರೂ.1,000/- ದಂಡ ಪ್ರತಿ ಪ್ರಕರಣಕ್ಕೆ. |
| 9 | ಪರೀಕ್ಷಾ ಕೊಠಡಿಯಲ್ಲಿ ವಿದ್ಯಾರ್ಥಿಗಳಿಂದ ಪಡೆದ ಉತ್ತರ ಪತ್ರಿಕೆಗಳು ಕಾಣೆಯಾದಲ್ಲಿ ಅಥವಾ ವಿದ್ಯಾರ್ತಿಗಳು ಉತ್ತರಿಸಿದ ಉತ್ತರ ಪತ್ರಿಕೆ ಬದಲಾವಣೆ ಮಾಡಿದಲ್ಲಿ (Replacement). | ಪ್ರಾಥಮಿಕ ವಿಚಾರಣೆ (ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ) ಮತ್ತು ಇಲಾಖಾ ವಿಚಾರಣೆ |
| 10 | ಥಿಯರಿ ಪರೀಕ್ಷೆಗಳ ಅಥವಾ ಪ್ರಾಯೋಗಿಕ ಪರೀಕ್ಷೆಗಳ ಮುಖ್ಯ ವೀಕ್ಷಕರು/ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು ತಮಗೆ ನಿಯೋಜಿಸಿದ ಕರ್ತವ್ಯಕ್ಕೆ ಹಾಜರಾಗಿ ನಡುವೆ ಅನಧಿಕೃತ ಗೈರುಹಾಜರಾಗುವುದು. | ಗೈರುಹಾಜರಾದ ಅವಧಿಯ ಸಂಬಳವನ್ನು ಕಟಾಯಿಸುವುದು. |
| 11 | ತಾಂತ್ರಿಕ ಪರೀಕ್ಷಾ ಮಂಡಳಿಯಿಂದ ನೇಮಕಗೊಂಡ ಪ್ರಾಯೋಗಿಕ ಪರೀಕ್ಷಕರನ್ನು ಪರೀಕ್ಷೆಗಳನ್ನು ನಡೆಸಲು ಮಾತೃಸಂಸ್ಥೆಯಿಂದ ಬಿಡುಗಡೆಗೊಳಿಸದ ಪ್ರಿನ್ಸಿಪಾಲರುಗಳು/ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರುಗಳಿಗೆ. | ರೂ.1,000/- ದಂಡ |
| 12 | ಪ್ರಾಯೋಗಿಕ ಪರೀಕ್ಷೆಗಳಿಗೆ ಮಂಡಳಿಯಿಂದ ಪರೀಕ್ಷಕರಾಗಿ ನಿಯೋಜನೆಗೊಂಡ ಪರೀಕ್ಷಕರು ಅನಧಿಕೃತವಾಗಿ ಗೈರುಹಾಜರಾಗುವುದು /ನಡುವೆ ಅನುಮತಿ ಇಲ್ಲದೇ ಅನಧಿಕೃತವಾಗಿ ಗೈರುಹಾಜರಾಗುವುದು. | ಗೈರುಹಾಜರಾದ ಅವಧಿಯ ಸಂಬಳವನ್ನು ಕಟಾಯಿಸುವುದು. |
| 13 | ತಾಂತ್ರಿಕ ಪರೀಕ್ಷಾ ಮಂಡಳಿಯಿಂದ ನೇಮಕಗೊಂಡ ಪ್ರಾಯೋಗಿಕ ಪರೀಕ್ಷಕರನ್ನು ಬಿಟ್ಟು ತಾಂ.ಶಿ.ಮಂಡಳಿಯ ಅನುಮತಿ ಪಡೆಯದೇ ಬೇರೆಯವರಿಂದ ಪರೀಕ್ಷೆಗಳನ್ನು ನಡೆಸುವುದು. | 1) ಮುಖ್ಯ ಅಧೀಕ್ಷಕರಿಗೆ ದಂಡ ರೂ.5,000/-.<br>2) ಮಂಡಳಿಯಿಂದ ನೇಮಕಗೊಳ್ಳದೇ/ ಅನುಮತಿ ಪಡೆಯದೇ ಅನಧಿಕೃತವಾಗಿ ಪರೀಕ್ಷೆ ನಡೆಸಿದ ಪರೀಕ್ಷಕರಿಗೆ ದಂಡ ರೂ.5,000/- |
| 14 | ಪ್ರಾಯೋಗಿಕ ಪರೀಕ್ಷೆಗಳ ಉತ್ತರ ಪತ್ರಿಕೆಗಳನ್ನು ಸ್ಕೀಮ್ ಆಫ್ ವ್ಯಾಲ್ಯುಯೇಷನ್ ಪ್ರಕಾರ ಮೌಲ್ಯಮಾಪನ ಮಾಡಲು ವಿಫಲವಾಗಿರುವುದು. | ಸಂಬಂಧಪಟ್ಟ ಪರೀಕ್ಷಕರಿಗೆ ರೂ.1,000/- ದಂಡ. |
| 15 | ಮಾದರಿ ಉತ್ತರಗಳನ್ನು ಮತ್ತು ಸ್ಕೀಮ್ ಆಫ್ ವ್ಯಾಲ್ಯುಯೇಷನ್‌ಗಳನ್ನು ಸರಿಯಾಗಿ ನೀಡದಿರುವ ಮುಖ್ಯ ಪರೀಕ್ಷಕರು/ಪ್ರಶ್ನೆಪತ್ರಿಕೆ ರಚನೆಕಾರರಿಗೆ. | ರೂ.5,000/- ದಂಡ. |
| 16 | ಮಾದರಿ ಉತ್ತರಗಳನ್ನು ಮತ್ತು ಸ್ಕೀಮ್ ಆಫ್ ವ್ಯಾಲ್ಯುಯೇಷನ್‌ಗಳನ್ನು ಪರೀಕ್ಷಕರು/ಸಮಿತಿಯ ಅಧ್ಯಕ್ಷರು/ ಸದಸ್ಯರು ಸಮರ್ಪಕವಾಗಿ ಪರಿಶೀಲಿಸದಿರುವುದು. | ರೂ.1,000/- ದಂಡ. |

| ಕ್ರ. ಸಂ. | ತಪ್ಪುಗಳ ವಿವರ | ಶಿಕ್ಷೆ/ದಂಡ |
|---|---|---|
| (1) | (2) | (3) |
| 17 | ಥಿಯರಿ ಪರೀಕ್ಷೆಯಲ್ಲಿ ವಿದ್ಯಾರ್ಥಿಯ ಪ್ರವೇಶ ಪತ್ರದಲ್ಲಿರುವ ಪ್ರಶ್ನೆಪತ್ರಿಕೆ ಕೋಡ್ ಬದಲು ಬೇರೆ ಪ್ರಶ್ನೆಪತ್ರಿಕೆ ಕೋಡ್‌ವುಳ್ಳ ಪ್ರಶ್ನೆಪತ್ರಿಕೆಗಳನ್ನು (wrong question paper code) ವಿದ್ಯಾರ್ಥಿಗಳಿಗೆ ವಿತರಿಸುವುದು. | ಕೊಠಡಿಯ ಪ್ರತಿ ಮೇಲ್ವಿಚಾರಕರಿಗೆ ರೂ.2,000/- ದಂಡ. |
| 18 | ಆನ್‌ಲೈನ್‌ನಲ್ಲಿ ಪರೀಕ್ಷಾ ಸಂಬಂಧದ ಕಾರ್ಯಗಳಿಗೆ ಅಗತ್ಯವಾದ ಈ ಕೆಳಕಂಡ ಮಾಹಿತಿಯನ್ನು ಸಮರ್ಪಕವಾಗಿ update ಮಾಡದಿರುವುದು.<br>1) ಹೊಸದಾಗಿ ಪ್ರವೇಶ ಪಡೆದ ವಿದ್ಯಾರ್ಥಿಗಳ ವಿವರಗಳನ್ನು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಪ್ರಕಾರ update ಮಾಡದಿರುವುದು /ತಪ್ಪಾಗಿ update ಮಾಡಿರುವುದು.<br>2) ವಿದ್ಯಾರ್ಥಿಯು ಪರೀಕ್ಷೆಗೆ ಹಾಜರಾಗಬೇಕಾದ ಪಠ್ಯ ವಿಷಯಗಳನ್ನು /Q.P.ಕೋಡ್‌ಗಳನ್ನು ಸರಿಯಾಗಿ Candidatelistನಲ್ಲಿ update ಮಾಡದಿರುವುದು/ತಪ್ಪಾಗಿ update ಮಾಡಿರುವುದು.<br>3) ಪರೀಕ್ಷೆಯಲ್ಲಿ (ಥಿಯರಿ/ಪ್ರಾಯೋಗಿಕ) ವಿದ್ಯಾರ್ಥಿಗಳ ಗೈರು ಹಾಜರಿಯನ್ನು ನಮೂದಿಸದಿರುವುದು.<br>4) ವಿದ್ಯಾರ್ಥಿಗಳ ಆಂತರಿಕ ಅಂಕಗಳನ್ನು ಸಂಪೂರ್ಣವಾಗಿ /ಸಮರ್ಪಕವಾಗಿ upload ಮಾಡದಿರುವುದು.<br>5) ಪರೀಕ್ಷಕರ ಪಟ್ಟಿಯನ್ನು ಸಂಪೂರ್ಣವಾಗಿ/ ಸಮರ್ಪಕವಾಗಿ update ಮಾಡದಿರುವುದು/ಸುಳ್ಳು ಮಾಹಿತಿ ನೀಡಿರುವುದು.<br>6) ಪ್ರಾಂಶುಪಾಲರ ಸ್ವವಿವರ/ಇ-ಮೇಲ್ ವಿಳಾಸ/ಸಂಸ್ಥೆಯ ದೂರವಾಣಿ ಸಂಖ್ಯೆಗಳ ವಿವರಗಳನ್ನು update ಮಾಡದಿರುವುದು.<br>7) ಪ್ರಾಯೋಗಿಕ ಪರೀಕ್ಷೆಗಳ ಅಂಕಗಳನ್ನು ಆನ್‌ಲೈನ್ ನಲ್ಲಿ ಸಂಪೂರ್ಣವಾಗಿ entry ಮಾಡದಿರುವುದು.<br>8) ಪ್ರಶ್ನೆಪತ್ರಿಕೆ ಬೇಡಿಕೆಪಟ್ಟಿಯನ್ನು ಸಮರ್ಪಕವಾಗಿ ಕಾಲಮಿತಿಯಲ್ಲಿ ಆನ್‌ಲೈನ್ ನಲ್ಲಿ ಸಲ್ಲಿಸದಿರುವುದು.<br>9) ಉತ್ತರಪತ್ರಿಕೆಗಳ Photo ಪ್ರತಿ ಮತ್ತು ಮರು ಮೌಲ್ಯಮಾಪನಕ್ಕೆ ಅರ್ಜಿ ಸಲ್ಲಿಸಿದ ವಿದ್ಯಾರ್ಥಿಗಳ ವಿವರ ಹಾಗೂ ಪ್ರಶ್ನೆಪತ್ರಿಕೆ ಕೋಡ್‌ಗಳನ್ನು ಸಮರ್ಪಕವಾಗಿ ಕಾಲಮಿತಿಯಲ್ಲಿ ಆನ್‌ಲೈನ್ ನಲ್ಲಿ ಸಲ್ಲಿಸದಿರುವುದು. | ಅ) ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಪ್ರತಿ ವಿದ್ಯಾರ್ಥಿಯ ತಪ್ಪು ವಿವರಕ್ಕೆ ರೂ.150/- ದಂಡ<br>ಇ) ಪ್ರಾಂಶುಪಾಲರಿಗೆ ರೂ.100/- ದಂಡ.<br>ಅ) ಪ್ರಾಂಶುಪಾಲರಿಗೆ ರೂ.5,000/- ದಂಡ.<br>ಇ) ವಿಷಯ ನಿರ್ವಾಹಕರಿಗೆ ರೂ.1,000/- ದಂಡ<br>ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರಿಗೆ ದಂಡ ಪ್ರತಿ ವಿದ್ಯಾರ್ಥಿಗೆ ರೂ.100/- ರಂತೆ.<br>ಅ) ಸಂಸ್ಥೆಯ ಪ್ರಾಂಶುಪಾಲರಿಗೆ ದಂಡ ರೂ.2,000/-<br>ಇ) ಪರಿವೀಕ್ಷಕರಿಗೆ ದಂಡ ರೂ.1,000/-<br>ಅ) ಸಂಬಂಧಪಟ್ಟ ಪ್ರಾಂಶುಪಾಲರಿಗೆ ದಂಡ ರೂ.5,000/-<br>ಇ) ವಿಷಯ ನಿರ್ವಾಹಕರಿಗೆ ದಂಡ ರೂ.1,000/-<br>ಅ) ಸಂಬಂಧಪಟ್ಟ ಪ್ರಾಂಶುಪಾಲರಿಗೆ ದಂಡ ರೂ.500/-<br>ಇ) ವಿಷಯ ನಿರ್ವಾಹಕರಿಗೆ ದಂಡ ರೂ.1,000/-<br>ಅ) ಸಂಬಂಧಪಟ್ಟ ಪರೀಕ್ಷಾ ಕೇಂದ್ರದ ಪ್ರಾಂಶುಪಾಲರು/ಮುಖ್ಯ ಅಧೀಕ್ಷಕರಿಗೆ ದಂಡ ರೂ.200/- ಪ್ರತಿ ಬ್ಯಾಚಿಗೆ.<br>ಇ) ಪರೀಕ್ಷಕರಿಗೆ ದಂಡ ರೂ.1,000/-ಪ್ರತಿ ಬ್ಯಾಚಿಗೆ.<br>ಪರೀಕ್ಷಾ ಕೇಂದ್ರದ ಪ್ರಾಂಶುಪಾಲರಿಗೆ ದಂಡ ರೂ.5,000/- + ಇಲಾಖಾ ತನಿಖೆ.<br>ಅ) ಪರೀಕ್ಷಾ ಕೇಂದ್ರದ ಪ್ರಾಂಶುಪಾಲರಿಗೆ ದಂಡ ರೂ.1,000/-<br>ಇ) ವಿಷಯ ನಿರ್ವಾಹಕರಿಗೆ ರೂ.500/- ದಂಡ. |
| 19 | ಮರು ಮೌಲ್ಯಮಾಪನ ಸಂದರ್ಭದಲ್ಲಿ 6-10 ಅಂಕಗಳ ವರೆಗೆ ವ್ಯತ್ಯಾಸ ಬಂದಲ್ಲಿ ಮೌಲ್ಯಮಾಪಕರಿಗೆ | ರೂ.1,000/- ದಂಡ ಪ್ರತಿ ಉತ್ತರಪತ್ರಿಕೆಗೆ. |
| 20 | ಮರು ಮೌಲ್ಯಮಾಪನ ಸಂದರ್ಭದಲ್ಲಿ 10ಕ್ಕಿಂತ ಹೆಚ್ಚು ಅಂಕಗಳ ವ್ಯತ್ಯಾಸ ಬಂದಲ್ಲಿ ಮೌಲ್ಯಮಾಪಕರಿಗೆ | ರೂ.5,000/- ದಂಡ ಪ್ರತಿ ಉತ್ತರಪತ್ರಿಕೆಗೆ. |
| 21 | ಮೌಲ್ಯಮಾಪನ ಸಮಯದಲ್ಲಿ ಮುಖ್ಯ ಪರೀಕ್ಷಕರು ಮೌಲ್ಯಮಾಪನವಾದ ಉತ್ತರಪತ್ರಿಕೆಯನ್ನು ರಿವ್ಯೂ ಮಾಡಿದ ಸಂದರ್ಭದಲ್ಲಿ 10ಕ್ಕಿಂತ ಹೆಚ್ಚು ಅಂಕಗಳ ವ್ಯತ್ಯಾಸ ಕಂಡುಬಂದಲ್ಲಿ | ಮೌಲ್ಯಮಾಪಕರಿಗೆ ದಂಡ ರೂ.1,000/- ಪ್ರತಿ ಉತ್ತರಪತ್ರಿಕೆಗೆ. |
| 22 | ಮಾದರಿ ಉತ್ತರಗಳು ಮತ್ತು ಸ್ಕೀಮ್ ಆಫ್ ವ್ಯಾಲ್ಯುಯೇಷನ್‌ಗಳನ್ನು ಪಾಲಿಸದೇ ಸಮರ್ಪಕವಾಗಿ ಮೌಲ್ಯಮಾಪನ ಮಾಡದಿರುವ ಮೌಲ್ಯಮಾಪಕರಿಗೆ(erratic valuation) | ರೂ.5,000/- ದಂಡ ಪ್ರತಿ ಉತ್ತರಪತ್ರಿಕೆಗೆ. |
| 23 | ತಡೆಹಿಡಿಯಲಾದ ಫಲಿತಾಂಶವನ್ನು ಪೂರಕ ಮಾಹಿತಿ ಒದಗಿಸಿ ಬಿಡುಗಡೆಗೊಳಿಸುವಲ್ಲಿ ಸಕ್ರಿಯಗೊಳ್ಳದ ಪ್ರಿನ್ಸಿಪಾಲರು/ಕಚೇರಿ ಸಿಬ್ಬಂದಿವರ್ಗ. | ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿವರ್ಗದವರ ವಿರುದ್ಧ ಸೂಕ್ತ ವಿಚಾರಣೆ ಮತ್ತು ಸೂಕ್ತ ದಂಡ –ವಿಚಾರಣಾ ಸಮಿತಿಯ ನಿರ್ಧಾರದ ಮೇರೆಗೆ. |
| 24 | ಪ್ರಶ್ನೆಪತ್ರಿಕೆಗಳನ್ನು ಪರೀಕ್ಷಾ ಕೊಠಡಿಗಳಲ್ಲಿ ವಿದ್ಯಾರ್ಥಿಗಳ ಸಮ್ಮುಖ ದೃಢೀಕರಣವಿಲ್ಲದೇ ತೆರೆಯುವುದು. | ಪರೀಕ್ಷಾ ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು/ಕೊಠಡಿ ಮೇಲ್ವಿಚಾರಕರಿಗೆ ರೂ.1,000/- ದಂಡ. |
| 25 | ಪರೀಕ್ಷಾ ಉತ್ತರಪತ್ರಿಕೆಗಳ (ಸ್ಟೇಷನರಿ) ಲೆಕ್ಕ ತಾಳೆಯಾಗದಿರುವುದು/ಸರಿಯಾಗಿ ನಿರ್ವಹಿಸದಿರುವುದು. | ಪರೀಕ್ಷಾ ಮುಖ್ಯ ಅಧೀಕ್ಷಕರಿಗೆ ದಂಡ ರೂ.3,000/-<br>ಉಪ ಮುಖ್ಯ ಅಧೀಕ್ಷಕರಿಗೆ ದಂಡ ರೂ.2,000/- ದಂಡ.<br>ಸ್ಟೋರ್‌ಕೀಪರ್‌ಗೆ ದಂಡ ರೂ.5,000/- ಮತ್ತು ಇಲಾಖಾ ವಿಚಾರಣೆ. |

| ಕ್ರ. ಸಂ. | ತಪ್ಪುಗಳ ವಿವರ | ಶಿಕ್ಷೆ/ದಂಡ |
|---|---|---|
| (1) | (2) | (3) |
| 26 | ಥಿಯರಿ ಪರೀಕ್ಷೆಗಳ ಪ್ರಶ್ನೆಪತ್ರಿಕೆಗಳ ಪ್ಯಾಕೆಟ್‌ಗಳನ್ನು ಪೋಲೀಸ್ ಠಾಣೆ/ಖಜಾನೆಯಲ್ಲಿ ಠೇವಣಿಮಾಡಿದ ಅಧಿಕೃತ ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು/ಮುಖ್ಯ ವೀಕ್ಷಕರನ್ನು ಬಿಟ್ಟು ಬೇರೆ ಸಿಬ್ಬಂದಿ ಪ್ರಶ್ನೆಪತ್ರಿಕೆಗಳ ಲಕೋಟೆಯನ್ನು ಪೋಲೀಸ್ ಠಾಣೆ/ಖಜಾನೆಯಿಂದ ತಂದ ಸಂದರ್ಭದಲ್ಲಿ | ಅಧಿಕೃತ ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು/ಮುಖ್ಯ ಅಧೀಕ್ಷಕರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ.<br>ಅನಧಿಕೃತವಾಗಿ ಪ್ರಶ್ನೆಪತ್ರಿಕೆಗಳನ್ನು ತರುವ ಸಿಬ್ಬಂದಿ/ಅಧಿಕಾರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ. |
| 27 | ಥಿಯರಿ ಪರೀಕ್ಷೆಗಳ ಉತ್ತರಪತ್ರಿಕೆಗಳ ಸೀಲ್ ಮಾಡಲ್ಪಟ್ಟ ಬಂಡಲ್‌ಗಳನ್ನು ತಾಂತ್ರಿಕ ಪರೀಕ್ಷಾ ಮಂಡಳಿಗೆ, ಮಂಡಳಿಯಿಂದ ನಿಯುಕ್ತಗೊಂಡ ಅಧಿಕೃತ ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು/ಮುಖ್ಯ ವೀಕ್ಷಕರ ಮೂಲಕ ಕಳುಹಿಸದಿದ್ದ ಸಂದರ್ಭದಲ್ಲಿ | ಮುಖ್ಯ ಅಧೀಕ್ಷಕರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ.<br>ಉಪ ಮುಖ್ಯ ಅಧೀಕ್ಷಕರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ. |
| 28 | ಥಿಯರಿ ಪರೀಕ್ಷೆಗಳ ಉತ್ತರಪತ್ರಿಕೆಗಳ ಸೀಲ್ ಮಾಡಲ್ಪಟ್ಟ ಬಂಡಲ್‌ಗಳನ್ನು ತಾಂತ್ರಿಕ ಪರೀಕ್ಷಾ ಮಂಡಳಿಗೆ, ಬೆಳಗಿನ ಸೆಷನ್ ಬಂಡಲ್‌ಗಳನ್ನು ಆಯಾ ದಿನವೇ/ಮಧ್ಯಾಹ್ನದ ಸೆಷನ್ ಬಂಡಲ್‌ಗಳನ್ನು ಮರುದಿನ ಸ್ವೀಕೃತಿಯಿರುವ ರಿಜಿಸ್ಟರ್ಡ್ ಅಂಚೆ ಮೂಲಕ ಕಳುಹಿಸದಿದ್ದಲ್ಲಿ. | ಮುಖ್ಯ ಅಧೀಕ್ಷಕರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ.<br>ಉಪ ಮುಖ್ಯ ಅಧೀಕ್ಷಕರಿಗೆ ದಂಡ ರೂ.೫,೦೦೦/– ಮತ್ತು ಇಲಾಖಾ ವಿಚಾರಣೆ. |
| 29 | ಮುಂದಿನ ದಿನದ ಪ್ರಶ್ನೆಪತ್ರಿಕೆಗಳ ಪ್ಯಾಕೆಟ್‌ಗಳನ್ನು ಪೋಲೀಸ್ ಠಾಣೆ/ಖಜಾನೆಯಿಂದ ಅನಧಿಕೃತವಾಗಿ ತಂದು ಪ್ಯಾಕೆಟ್‌ಗಳನ್ನು ತೆರೆಯಲ್ಪಟ್ಟ ಸಂದರ್ಭದಲ್ಲಿ | ಸಂಬಂಧಪಟ್ಟ ಮುಖ್ಯ ಅಧೀಕ್ಷಕರು/ಉಪ ಮುಖ್ಯ ಅಧೀಕ್ಷಕರು /ಮುಖ್ಯ ವೀಕ್ಷಕರ ವಿರುದ್ಧ ಇಲಾಖಾ ವಿಚಾರಣೆ ಮತ್ತು ದಂಡ. |
| 30 | ಮೇಲೆ ನಮೂದಿಸಿದ ಯಾವುದೇ ಶೀರ್ಷಿಕೆಯಲ್ಲಿ ಬರದ ಪರೀಕ್ಷಾ ಸಂಬಂಧದ ಕರ್ತವ್ಯಲೋಪಗಳು ಮತ್ತು ಮಾಲ್‌ಪ್ರಾಕ್ಟೀಸ್ ಪ್ರಕರಣಗಳಿಗೆ. | ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿ ವರ್ಗದವರ ವಿರುದ್ಧ ಸೂಕ್ತ ವಿಚಾರಣೆ/ಸೂಕ್ತ ದಂಡ – ವಿಚಾರಣಾ ಸಮಿತಿಯ ನಿರ್ಧಾರದ ಮೇರೆಗೆ. |

**ಬಿ.ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**PR. 287**
**SC. 50**

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀ ಪರಮೇಶ್ವರ ಹೆಚ್. ತೋಳೆ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಖಜಾನೆ ಇಲಾಖೆ ಇವರ ವಿರುದ್ಧದ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಆಇ 224 ಆಖಇ 2010 ದಿ:13.10.2010
2) ಅಪರ ನಿಬಂಧಕರು ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿ ಸಂಖ್ಯೆ:ಲೋಕ್/ಎಆರ್‌ಇ–4/ಇಎನ್‌ಕ್ಯೂ–56/2010 ದಿ:17.07.2014
3) ಉಪ ಲೋಕಾಯುಕ್ತ–1 ಕರ್ನಾಟಕ ಲೋಕಾಯುಕ್ತ ಇವರ ಶಿಫಾರಸು ಪತ್ರ ದಿ:26.07.2014 ಮತ್ತು 14.10.2014.
4) ಶ್ರೀ ಪರಮೇಶ್ವರ ಹೆಚ್. ತೋಳೆ ಅವರಿಗೆ ನೀಡಲಾದ ಕಾರಣ ಕೇಳುವ ನೋಟೀಸ್ ದಿ:05.11.2014
5) ಕಾರಣ ಕೇಳುವ ನೋಟೀಸ್‌ಗೆ ಶ್ರೀ ಪರಮೇಶ್ವರ ಹೆಚ್. ತೋಳೆ, ಅವರು ನೀಡಿದ ಸಮಜಾಯಿಷಿ ದಿ:05.12.2014
6) ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂಖ್ಯೆ ಪಿಎಸ್‌ಸಿ 258 ಸಿಎನ್‌ಎಸ್14 ದಿನಾಂಕ:12.03.2015

**ಪ್ರಸ್ತಾವನೆ:**

ಶ್ರೀ ಪರಮೇಶ್ವರ ಹುಸನಪ್ಪ ತೋಳೆ, ಪ್ರಥಮ ದರ್ಜೆ ಸಹಾಯಕರು, ಉಪ ಖಜಾನೆ, ಜೇವರ್ಗಿ, ಗುಲ್ಬರ್ಗಾ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಹನುಮಂತಪ್ಪ, ನಿವೃತ್ತ ಉಪಾಧ್ಯಾಯರು ಇವರ ಬಾಕಿ ವೇತನ ಬಿಲ್ಲು ಪಾಸು ಮಾಡಲು ದಿ:28.03.2007ರಂದು ರೂ.1000/ಗಳ– ಲಂಚ ಪಡೆಯುವಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿ ಬಿದ್ದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ(1)ರಲ್ಲಿ ಓದಲಾದ ದಿ:13.10.2010ರ ಸರ್ಕಾರಿ ಆದೇಶದಲ್ಲಿ ಪೂರ್ಣ ಪ್ರಮಾಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು ವಿಚಾರಣೆಗಳು–4 ಅವರು ವಿಚಾರಣೆ ನಡೆಸಿ ಮೇಲೆ(2)ರಲ್ಲಿ ಓದಲಾದ ದಿ:17.07.2014ರ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತಂತೆ ಕೆಳಕಂಡ ನಿರ್ಣಯ ನೀಡಿದರು.

ಪಿರ್ಯಾದಿ ಶ್ರೀ ಹನುಮಂತಪ್ಪ ನಿವೃತ್ತ ಶಿಕ್ಷಕರಾಗಿದ್ದು ತಮಗೆ ಬರಬೇಕಾದ ವಿಶೇಷ ವೇತನ ಬಡ್ತಿ ಬಾಕಿ ಮೊತ್ತ ರೂ.9,397/–ಗಳ ಬಿಲ್ಲನ್ನು ಬಿಇಓ ಜೇವರ್ಗಿ ರವರು ದಿ:15.03.2007 ರಂದು ಜೇವರ್ಗಿ ಉಪ ಖಜಾನೆಗೆ ಕಳುಹಿಸಿದ್ದು, ಸದರಿ ಖಜಾನೆಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿರುವ ಆಪಾದಿತ ಶ್ರೀ ಪರಮೇಶ್ವರ ಹೆಚ್. ತೋಳೆ ಇವರು ಚೆಕ್ ಅನ್ನು ನೀಡಲು ರೂ. 1000/–ಗಳ ಲಂಚ ಕೇಳಿದ್ದು, ಲಂಚ ಕೊಡಲು ಇಷ್ಟವಿಲ್ಲದ ಕಾರಣ ಲೋಕಾಯುಕ್ತ ಪೊಲೀಸರಿಗೆ ದೂರು ನೀಡಿದ್ದು ಅದರನ್ವಯ ಟ್ರ್ಯಾಪ್ ಏರ್ಪಡಿಸಲಾಗಿರುತ್ತದೆ.

ಲೋಕಾಯುಕ್ತ ಪೋಲಿಸರ ನಿರ್ದೇಶನದಂತೆ ಪಿರ್ಯಾದುದಾರರು ದಿ:28.03.2007 ರಂದು ಆಪಾದಿತರ ಕಛೇರಿಗೆ ಹೋಗಿ ಅವರನ್ನು ಭೇಟಿ ಮಾಡಿ ಹಣ ನೀಡಿದ್ದಾರೆ ಪಿರ್ಯಾದಿಯಿಂದ ಸಿಗ್ನಲ್ ಪಡೆದ ಪೊಲೀಸರು ಆಪಾದಿತ ನೌಕರರಿಗೆ ನೀಡಿದ ಹಣವನ್ನು ವಶಪಡಿಸಿಕೊಂಡಿರುತ್ತಾರೆ. ಲಂಚದ ಹಣವನ್ನು ಪಿರ್ಯಾದಿಯಿಂದ ಒತ್ತಾಯಿಸಿದ ಬಗ್ಗೆ ಮತ್ತು ಲಂಚದ ಹಣ ಪಡೆದ ನಂತರ ಅದನ್ನು ಎಣಿಸಿಕೊಂಡು ತನ್ನ ಜೇಬಿನಲ್ಲಿ ಆರೋಪಿ ಇಟ್ಟುಕೊಂಡ ಬಗ್ಗೆ ನೆರಳು ಸಾಕ್ಷಿ ಶ್ರೀ ರಾಜಶೇಖರ್ ಮತ್ತು ಶ್ರೀ ಚಂದ್ರಶೇಖರ್ ಇವರುಗಳ ಹೇಳಿಕೆಯಿಂದ ಸಾಭೀತಾಗಿರುತ್ತದೆ. ಅಲ್ಲದೆ ಆರೋಪಿಯ ಎರಡೂ ಕೈಗಳನ್ನು ತೊಳೆಯಿಸಲಾಗಿದ್ದು ಅದು ತಿಳಿಗುಲಾಬಿ ಬಣ್ಣಕ್ಕೆ ಪರಿವರ್ತನೆಯಾಗಿದ್ದು ಪಿನಾಪ್ತಲಿನ್ ಅಂಶ ಇರುವುದನ್ನು ರಾಸಾಯನಿಕ ತಜ್ಞರು ತಮ್ಮ ವರದಿಯಲ್ಲಿ ಖಚಿತ ಪಡಿಸಿದ್ದು ಇದರಿಂದಲೂ ಆರೋಪಿ ಲಂಚ ಸ್ವೀಕರಿಸಿದ ಆರೋಪವು ಸ್ಪಷ್ಟವಾಗಿರುತ್ತದೆ. ಶ್ರೀ ರಾಜಶೇಖರ್ ಮತ್ತು ಶ್ರೀ ಚಂದ್ರಶೇಖರ್ ಮತ್ತು ತನಿಖಾಧಿಕಾರಿಯಾದ ಪೊಲೀಸ್ ಇನ್ಸ್‌ಪೆಕ್ಟರ್ ಬೀದರ್ ಇವರುಗಳು ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಮಹಜರುಗಳಿಗೆ ಪೂರ್ಣವಾಗಿ ಸಾಕ್ಷಿದಾರರಾಗಿರುತ್ತಾರೆ.

ವಿಚಾರಣೆಯಲ್ಲಿ ಲೋಕಾಯುಕ್ತ ಪೊಲೀಸರು ಲಂಚ ತೆಗೆದುಕೊಂಡ ಬಗ್ಗೆ ಕಾರಣವನ್ನು ತಿಳಿಸುವಂತೆ ಆರೋಪಿಯನ್ನು ಕೇಳಲಾಗಿ ಆರೋಪಿಯು ಲಂಚ ತೆಗೆದು ಕೊಂಡಿರುವುದನ್ನು ಅಲ್ಲಗಳೆದಿರುತ್ತಾರೆ. ಆಪಾದಿತ ನೌಕರರ ಬಳಿಯಲ್ಲಿದ್ದ ಫಿರ್ಯಾದಿಗೆ ಚೆಕ್ ನೀಡುವುದಕ್ಕೆ ಸಂಬಂಧಪಟ್ಟ ಕಡತವನ್ನು ಪೊಲೀಸರು ವಶಪಡಿಸಿಕೊಂಡು ಮಹಜರ್ ದಾಖಲಿಸಿರುತ್ತಾರೆ. ಪಿರ್ಯಾದುದಾರರು ಹೇಳಿಕೆ ನೀಡಿ ತಮಗೆ ವಯಸ್ಸಾಗಿದ್ದು ಅನಾರೋಗ್ಯ, ಫಿಟ್ಸ್ ನಿಂದ ಬಳಲುತ್ತಿದ್ದು ನೆನಪು ಮಾಸಿದ ಪ್ರಯುಕ್ತ ಎಲ್ಲಾ ಘಟನೆಗಳನ್ನು ಸರಿಯಾಗಿ ನೆನಪಿಸಿಕೊಳ್ಳಲು ಆಗುತ್ತಿಲ್ಲ ಹಾಗೂ ಸರಿಯಾಗಿ ಮಾತನಾಡಲು ಅಶಕ್ತನೆಂದು ತಿಳಿಸಿರುತ್ತಾರೆ. ಸದರಿ ಸಾಕ್ಷಿಯನ್ನು ಆಪಾದಿತ ಸರ್ಕಾರಿ ನೌಕರರ ಪರ ಪಾಟೀ ಸವಾಲು ಮಾಡಲು ಅವಕಾಶ ನೀಡಲಾಗಿ ಆಪಾದಿತ ನೌಕರರ ಪರ ವಕೀಲರು ಗೈರು ಹಾಜರಾಗಿದ್ದು ಪಾಟೀ ಸವಾಲು ಮಾಡಲು ನೀಡಲಾಗಿದ್ದ ಅವಕಾಶವನ್ನು ಬಳಸಿಕೊಂಡಿಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ. ಆದ್ದರಿಂದ ಆಪಾದಿತ ನೌಕರರಿಗೆ ಸಾಕ್ಷಿಯನ್ನು ವಿಚಾರಣೆ ಮಾಡಲು ಅನುಮತಿ ನೀಡಲಾಯಿತು. ಈ ಅವಕಾಶವನ್ನು ಆಪಾದಿತ ನೌಕರರು ಉಪಯೋಗಿಸಿಕೊಂಡಿಲ್ಲ. ತದನಂತರ ಆಪಾದಿತ ನೌಕರರ ವಕೀಲರು ದಿ:20.09.2013ರಂದು ಅರ್ಜಿ ಸಲ್ಲಿಸಿ ಪಿರ್ಯಾದಿ ಸಾಕ್ಷಿಯನ್ನು ವಿಚಾರಣೆ ಮಾಡಲು ಆಪಾದಿತ ನೌಕರರಿಗೆ ಅವಕಾಶ ನೀಡಲು ಕೋರಿದ್ದು ಅದರಂತೆ ಪಿರ್ಯಾದುದಾರರಿಗೆ ನೋಟೀಸ್ ನೀಡಲಾಗಿ ಪಿರ್ಯಾದುದಾರರು ದಿ:02.11.2013 ರಂದು ನಿಧನರಾಗಿರುವುದಾಗಿ ತನಿಖಾಧಿಕಾರಿಗಳು ಮರಣ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ.

ಪಿರ್ಯಾದುದಾರರು ತಮ್ಮ ಅನಾರೋಗ್ಯದ ನಡುವೆಯು ಹೇಳಿಕೆ ನೀಡಿದ್ದು, ಅವರನ್ನು ಪಾಟೀಸವಾಲು ಮಾಡಲು ಆಪಾದಿತ ನೌಕರರಿಗೆ ಅವಕಾಶ ನೀಡಿದರೂ ಅವರು ಪಾಟೀಸವಾಲು ಮಾಡಿರುವುದಿಲ್ಲ. ಹಾಗೂ ಆ ದಿನದಂದು ತಮ್ಮ ರಕ್ಷಣ ವಕೀಲರನ್ನು ಕರೆತರದೇ ಇರುವುದು ಆಪಾದಿತ ನೌಕರರಿಗೆ ಆಸಕ್ತಿ ಇಲ್ಲದಿರುವುದನ್ನು ತೋರಿಸುತ್ತದೆ. ತದನಂತರ ಆಪಾದಿತ ವಕೀಲರ ರಕ್ಷಣ ವಕೀಲರು ಉಳಿದ ಸಾಕ್ಷಿದಾರರಾದ ಶ್ರೀ ರಾಜಶೇಖರ್ ಹಾಗೂ ಚಂದ್ರಶೇಖರ್ ಇವರುಗಳ ಅಡ್ಡವಿಚಾರಣೆ ನಡೆಸಿದ್ದು, ಸಾಕ್ಷಿದಾರರು ಅವರ ಸಲಹೆಗಳನ್ನು ನಿರಾಕರಿಸಿರುತ್ತಾರೆ.

ಆಪಾದಿತ ನೌಕರರ ರಕ್ಷಣ ಹೇಳಿಕೆಯಲ್ಲಿ ಪಿರ್ಯಾದುದಾರರು ತಮಗೆ ಪರಿಚಿತರಾಗಿದ್ದು ಅವರ ಕೋರಿಕೆ ಮೇರೆಗೆ ರೂ.1000/- ಸಾಲ ನೀಡಿದ್ದು, ಅವರು ಅದನ್ನು ತಮಗೆ ಹಿಂತಿರುಗಿಸುವಾಗ ಪೊಲೀಸರು ತಮ್ಮನ್ನು ಹಿಡಿದಿರುವುದಾಗಿ ತಿಳಿಸಿರುತ್ತಾರೆ. ಆದರೆ ಅಪಾದಿತ ನೌಕರರು ನೀಡಿದ ಹೇಳಿಕೆಯನ್ನು ಓದಲಾಗಿ ಟ್ರ್ಯಾಪ್ ನಡೆದ ದಿ:28.03.2007ರಂದೇ ಪಿರ್ಯಾದುದಾರರು ಸಾಲ ಪಡೆದು ಹಿಂತಿರುಗಿಸಿರುವುದಾಗಿ ಅರ್ಥ ಕೊಡುತ್ತದೆ. ಸಾಲಪಡೆದವರು ಪಡೆದ ದಿನವೇ ಹಿಂತಿರುಗಿಸುವ ಅವಕಾಶಗಳು ಇರುವುದಿಲ್ಲ. ಒಂದು ವೇಳೆ ಪಿರ್ಯಾದುದಾರರು ಆಪಾದಿತ ನೌಕರರಿಗೆ ಪರಿಚಿತರಾಗಿದ್ದು ರೂ.1000/- ಸಾಲ ಪಡೆದಿದ್ದಲ್ಲಿ ಸಹಾಯ ಮಾಡಿದವರನ್ನು ಲೋಕಾಯುಕ್ತ ಟ್ರ್ಯಾಪ್‌ಗೆ ಸಿಲುಕಿಸುವ ಸನ್ನಿವೇಶ ಮಾನವೀಯ ಗುಣಕ್ಕೆ ವಿರುದ್ಧವಾಗಿರುತ್ತದೆ. ಆಪಾದಿತ ನೌಕರರ ಇನ್ನೊಂದು ವಾದವೆಂದರೆ ಪಿರ್ಯಾದುದಾರರ ಬಿಲ್‌ಗೆ ಎತ್ತಿದ ಆಕ್ಷೇಪಣೆಗಳಿಗೆ ಬಿಇಒ ರವರು ಉತ್ತರಿಸಿಲ್ಲವೆಂಬುದು. ಆಕ್ಷೇಪಣೆ ಮತ್ತು ಅದಕ್ಕೆ ಉತ್ತರವು ಖಜಾನೆ ಮತ್ತು ಬಿಇಒ ಮಧ್ಯೆ ನಡೆಯಬೇಕಾಗಿದ್ದು ಆಕ್ಷೇಪಣೆಗಳಿಗೆ ಉತ್ತರಿಸದಿದ್ದಲ್ಲಿ ಬಿಲ್ಲುಗಳು ಬಿಇಒ ಕಛೇರಿಯಲ್ಲಿರಬೇಕಾಗಿದ್ದು, ಆಪಾದಿತ ನೌಕರರ ಬಳಿ ಸದರಿ ಬಿಲ್ಲಿನ ಕಡತವನ್ನು ವಶಪಡಿಸಿಕೊಳ್ಳುವ ಪ್ರಮೇಯವೇ ಇರುತ್ತಿರಲಿಲ್ಲ. ಜೊತೆಗೆ ಈ ಸಂಗತಿಯನ್ನು ಪಿರ್ಯಾದುದಾರರಿಗೆ ತಿಳಿಸಿದ ಬಗ್ಗೆ ಯಾವುದೇ ಪುರಾವೆಗಳಿಲ್ಲ. ಆರೋಪಿತ ನೌಕರರು ಇದನ್ನು ಮರೆಮಾಚಿ ಪಿರ್ಯಾದುದಾರರಿಂದ ಹಣಕ್ಕೆ ಬೇಡಿಕೆ ಇಟ್ಟಿರುವಂತೆ ತೋರುತ್ತದೆ. ಆರೋಪಿತ ನೌಕರರು ಪಿರ್ಯಾದಿಗೆ ಸಾಲ ನೀಡಿರುವ ಸಂಭಾವ್ಯತೆಯನ್ನು ರುಜುವಾತು ಮಾಡುವುದಲ್ಲಿ ವಿಫಲರಾಗಿರುತ್ತಾರೆ. ಈ ಎಲ್ಲಾ ಕಾರಣಗಳಿಂದಾಗಿ ಆರೋಪಿತ ನೌಕರರ ಮೇಲಿನ ಅಕ್ರಮ ಸಂಭಾವನೆ ಪಡೆದ ಆರೋಪವು ಸಾಭೀತಾಗಿರುತ್ತದೆ.

ಸನ್ಮಾನ್ಯ ಉಪ ಲೋಕಾಯುಕ್ತರು ಈ ವಿಚಾರಣಾ ವರದಿಯನ್ನು ಪರಾಮರ್ಶಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ:14.10.2014ರ ಪತ್ರದಂತೆ ಶಿಫಾರಸು ನೀಡಿದರು. ಈ ನಡುವೆ ಆರೋಪಿತರಾದ ಶ್ರೀ ಪರಮೇಶ್ವರ ಹೆಚ್. ತೋಳೆ, ಪ್ರಥಮ ದರ್ಜೆ ಸಹಾಯಕರು ದಿನಾಂಕ:31.03.2013ರಂದು ವಯೋನಿವೃತ್ತಿ ಹೊಂದಿದರು. ಆಪಾದಿತ ನೌಕರಿಗೆ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸಿನೊಂದಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ವಯ ಮೇಲೆ (4)ರಲ್ಲಿ ಓದಲಾದ ದಿನಾಂಕ:05.11.2014ರ ನೋಟೀಸ್ ಜಾರಿ ಮಾಡಿ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸು ಕುರಿತು ಅಹವಾಲು ಏನಾದರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಯಿತು. ಶ್ರೀ ಪರಮೇಶ್ವರ ಹೆಚ್. ತೋಳೆ ಇವರು ಮೇಲೆ(5)ರಲ್ಲಿ ಓದಲಾದ ದಿನಾಂಕ:05.12.2014ರ ಉತ್ತರ ನೀಡಿ ಫಿರ್ಯಾದುದಾರರಾದ ಶ್ರೀ ಹನುಮಂತಪ್ಪ ಅಯ್ಯಪ್ಪ ದಾಸರ್ ನಿವೃತ್ತ ಶಿಕ್ಷಕರಿಗೆ ತಾವು ರೂ.1,000/-ಸಾಲ ನೀಡಿದ್ದು, ಖಜಾನೆಯಲ್ಲಿ ಅವರ ಬಿಲ್‌ಗೆ ಆಕ್ಷೇಪಣೆ ಮಾಡಿದ ಪ್ರಯುಕ್ತ, ಸದರಿ ಆಕ್ಷೇಪಣೆಯನ್ನು ತಾವೇ ಮಾಡಿದ್ದೇವೆಂದು ಭಾವಿಸಿ, ಲೋಕಾಯುಕ್ತ ಪೋಲಿಸರಿಗೆ ಸುಳ್ಳು ದೂರು ನೀಡಿ ತಾವು ನೀಡಿದ ಸಾಲ ಹಿಂತಿರುಗಿಸುವ ನೆಪದಲ್ಲಿ ತಮ್ಮನ್ನು ಲೋಕಾಯುಕ್ತ ಪೊಲೀಸರ ಟ್ರ್ಯಾಪ್‌ಗೆ ಸಿಲುಕಿಸಿರುತ್ತಾರೆಂದು, ಸದರಿ ಬಿಲ್ಲನ್ನು ಪಾಸು ಮಾಡುವ ಅಧಿಕಾರವಾಗಲಿ ಅಥವಾ ಅದಕ್ಕೆ ಆಕ್ಷೇಪಣೆಯನ್ನು ಹಾಕುವ ಅಧಿಕಾರವಾಗಲಿ ತಮಗೆ ಇರಲಿಲ್ಲ ಇದಲ್ಲದೇ ಈ ಪ್ರಕರಣದಲ್ಲಿ ಗುಲ್ಬರ್ಗಾ ಪ್ರಧಾನ ಸತ್ರ ನ್ಯಾಯಾಲಯದಲ್ಲಿ ವಿಶೇಷ ಮೊಕದ್ದಮೆ ಸಂಖ್ಯೆ:85/2008 ನಡೆದು ಸುಧೀರ್ಘ ವಿಚಾರಣೆಯ ನಂತರ ತಮ್ಮನ್ನು ನಿರಪರಾಧಿ ಎಂದು ತೀರ್ಮಾನಿಸಿ ದಿ:10.07.2009ರ ಆದೇಶದಲ್ಲಿ ಖುಲಾಸೆಗೊಳಿಸಿದ್ದು ಈ ಆದೇಶವನ್ನು ಪ್ರಶ್ನಿಸಿ ಲೋಕಾಯುಕ್ತ ಪೊಲೀಸರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಮೇಲ್ಮನವಿಯು ವಜಾಗೊಂಡಿದ್ದು, ಈ ರೀತಿ ಎರಡು ನ್ಯಾಯಾಲಯಗಳು ನನ್ನ ಪರವಾಗಿ ತೀರ್ಪು ನೀಡಿದ ನಂತರವೂ ಸಹ ಲೋಕಾಯುಕ್ತದಿಂದ ಅನಗತ್ಯವಾಗಿ ಇಲಾಖಾ ವಿಚಾರಣೆಯನ್ನು ನಡೆಸಲಾಗಿದೆ.

ವಿಚಾರಣೆಯಲ್ಲೂ ಸಹ 4 ಸಾಕ್ಷಿಗಳ ಹೇಳಿಕೆ ಹಾಗೂ 6 ದಾಖಲೆಗಳ ದೃಢೀಕೃತ ಪ್ರತಿಗಳನ್ನು ಗುರುತಿಸಿ, ಬೇರೆ ಯಾವ ಮುದ್ದೆ ಮಾಲನ್ನು ಪರಿಶೀಲಿಸದೇ ನಿರ್ಣಯ ತಳೆಯಲಾಗಿದೆ. ನನ್ನ ಪರವಾಗಿ ನನ್ನ ರಕ್ಷಣಾ ಸಹಾಯಕರು ಒದಗಿಸಿದ ಸಾಕ್ಷಿ, ಪುರಾವೆಗಳನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ. ಚೆಕ್ ಕೊಡುವ ಅಧಿಕಾರ ತನಗೆ ಇರುವುದಿಲ್ಲವಾದ ಕಾರಣ ನಾನು ಫಿರ್ಯಾದಿಗೆ ಚೆಕ್ ಕೊಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಪ್ರಕರಣದ ಸಾಕ್ಷಿಗಳ ಹೇಳಿಕೆಗಳಲ್ಲಿ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಗೊಂದಲಗಳಿರುವಾಗ ಹಾಗೂ ಒಂದನೇ ಸಾಕ್ಷಿಯ ಆರೋಗ್ಯ ಕೊಂಚವು ಸುಸ್ಥಿತಿಯಲ್ಲಿ ಇಲ್ಲದೇ ಇರುವುದು ಆತನ ಹೇಳಿಕೆಯಿಂದಲೇ ದೃಢಪಟ್ಟಿರುವಾಗ ಅಂತಹಾ ಸಾಕ್ಷ್ಯಗಳನ್ನು ಆಧರಿಸಿ ಆರೋಪ ಸಾಬೀತಾಗಿದೆ ಎಂಬ ನಿರ್ಣಯಕ್ಕೆ ಬಂದಿರುವುದು ಸರಿಯಲ್ಲ. ನನ್ನ ವಕೀಲರ ಒಂದು ದಿನ ಹಾಜರಾಗದ ಕಾರಣಕ್ಕೆ ಪಾಟೀ ಸವಾಲು ಮಾಡುವ ಅವಕಾಶವನ್ನೇ ನಿರಾಕರಿಸಲಾಗಿದೆ. ಸಾಕ್ಷಿಗಳು ನೋಟಿಗೆ ಸವರಿದ ಪೌಡರ್ ಹಾಗೂ ನನ್ನ ಕೈತೊಳೆಯಲಾದ ದ್ರಾವಣದ ವಿವರವನ್ನು ನೀಡದೇ ಇದ್ದರೂ ಸಹ ಅವರುಗಳ ಹೇಳಿಕೆಯನ್ನು ಪರಿಗಣಿಸಲಾಗಿದೆ. ಮೇಲಾಗಿ ನಾನು 28-03-2007ರಂದು ಫಿರ್ಯಾದುದಾರರಿಗೆ ನೀಡಿದ ಸಾಲವನ್ನು ಅಂದೇ ಅವರು ವಾಪಸ್ ಮಾಡಿ ಚೆಕ್ ಪಾಸ್ ಮಾಡುವ ಅಧಿಕಾರ ಹೊಂದಿರದ ನನ್ನನ್ನು ಲೋಕಾಯುಕ್ತ ಪೋಲೀಸರಿಂದ ಟ್ರ್ಯಾಪ್ ಮಾಡಿಸಿದ್ದಾರೆ ಎಂಬ ವಾದವನ್ನು ಸಾಕ್ಷ್ಯಗಳೊಡನೆ ಮಂಡಿಸಿರುವುದನ್ನು ಪರಿಗಣಿಸಿರುವುದಿಲ್ಲ. ಉಪಲೋಕಾಯುಕ್ತರಿಗೆ ದಂಡನೆ ವಿಧಿಸಲು ಶಿಫಾರಸು ಮಾಡುವ ಅಧಿಕಾರ ಇರುವುದಿಲ್ಲ. ಆದ್ದರಿಂದ ವಿಚಾರಣಾವರದಿ ಹಾಗೂ ಉಪಲೋಕಾಯುಕ್ತರ ಶಿಫಾರಸನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿ ವಿವಾದಕ್ಕೆ ಹೊರತಾದ ಕೆಲವು ಅಂಶಗಳಿವೆ. ಆರೋಪಿತರು ದಿನಾಂಕ:28-03-2007ರಂದು ರೂ.1,000ಗಳನ್ನು ಪಡೆದಿರುವುದು. ತಕ್ಷಣವೇ ಅವರನ್ನು ಲೋಕಾಯುಕ್ತ ಪೋಲೀಸರು ಟ್ರ್ಯಾಪ್ ಮಾಡಿರುವುದು. 500 ರೂ. 1 ನೋಟು ರೂ.100ಗಳ 5 ನೋಟುಗಳನ್ನು ಆರೋಪಿತರ ಎಡ ಜೇಬಿನಿಂದ ವಶಪಡಿಸಿಕೊಂಡಿರುವುದು. ಆರೋಪಿತರ ಕೈ ಬೆರಳನ್ನು ಸೋಡಿಯಂ ಬೈ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆದಾಗ ಅದು ಗುಲಾಬಿ ಬಣ್ಣಕ್ಕೆ ತಿರುಗಿದ್ದು, ಸದರಿ ನೋಟುಗಳ ಸಂಖ್ಯೆಯು ಟ್ರ್ಯಾಪ್ ಪೂರ್ವ ಮಹಜರಿನಲ್ಲಿ ನಮೂದಿಸಿದ ಸಂಖ್ಯೆಯೇ ಆಗಿರುವುದು. ಫಿರ್ಯಾದಿಯು ನೀಡಿದ ದೂರು ಹಾಗೂ ವಶಪಡಿಸಿಕೊಂಡ ಹಣ ಇಲ್ಲಿ ಬೇಡಿಕೆ ಮತ್ತು ಸ್ವೀಕಾರ ಇರುವುದನ್ನು ಸಾಬೀತುಪಡಿಸುತ್ತವೆ.

ಇಲಾಖಾ ವಿಚಾರಣೆಯಲ್ಲಿ ಆಪಾದಿತ ನೌಕರರ ರಕ್ಷಣ ಹೇಳಿಕೆಯಲ್ಲಿ ಪಿರ್ಯಾದುದಾರರು ತಮಗೆ ಪರಿಚಿತರಾಗಿದ್ದು ಅವರ ಕೋರಿಕೆ ಮೇರೆಗೆ ರೂ.1000/- ಸಾಲ ನೀಡಿದ್ದು, ಅವರು ಅದನ್ನು ತಮಗೆ ಹಿಂತಿರುಗಿಸುವಾಗ ಪೊಲೀಸರು ತಮ್ಮನ್ನು ಹಿಡಿದಿರುವುದಾಗಿ ತಿಳಿಸಿರುತ್ತಾರೆ. ಆದರೆ ಅಪಾದಿತ ನೌಕರರು ನೀಡಿದ ಹೇಳಿಕೆಯನ್ನು ಓದಲಾಗಿ ಟ್ರಾಪ್ ನಡೆದ ದಿ:28.03.2007 ರಂದೇ ಪಿರ್ಯಾದುದಾರರು ಸಾಲ ಪಡೆದು ಹಿಂತಿರುಗಿಸಿರುವುದಾಗಿ ಅರ್ಥ ಕೊಡುತ್ತದೆ. ಸಾಲಪಡೆದವರು ಪಡೆದ ದಿನವೇ ಹಿಂತಿರುಗಿಸುವ ಅವಕಾಶಗಳು ಇರುವುದಿಲ್ಲ. ಒಂದುವೇಳೆ ಪಿರ್ಯಾದುದಾರರು ಆಪಾದಿತ ನೌಕರರಿಗೆ ಪರಿಚಿತರಾಗಿದ್ದು ರೂ.1000/- ಸಾಲ ಪಡೆದಿದ್ದಲ್ಲಿ ಸಹಾಯ ಮಾಡಿದವರನ್ನು ಲೋಕಾಯುಕ್ತ ಟ್ರ್ಯಾಪ್‌ಗೆ ಸಿಲುಕಿಸುವ ಸನ್ನಿವೇಶ ಮಾನವೀಯ ಗುಣಕ್ಕೆ ವಿರುದ್ಧವಾಗಿರುತ್ತದೆ. ಆಪಾದಿತ ನೌಕರರ ಇನ್ನೊಂದು ವಾದವೆಂದರೆ ಪಿರ್ಯಾದುದಾರರ ಬಿಲ್‌ಗೆ ಎತ್ತಿದ ಆಕ್ಷೇಪಣೆಗಳಿಗೆ ಬಿಇಒ ರವರು ಉತ್ತರಿಸಿಲ್ಲವೆಂಬುದು. ಆಕ್ಷೇಪಣೆ ಮತ್ತು ಅದಕ್ಕೆ ಉತ್ತರವು ಖಜಾನೆ ಮತ್ತು ಬಿಇಒ ಮಧ್ಯೆ ನಡೆಯಬೇಕಾಗಿದ್ದು ಆಕ್ಷೇಪಣೆಗಳಿಗೆ ಉತ್ತರಿಸದಿದ್ದಲ್ಲಿ ಬಿಲ್ಲುಗಳು ಬಿಇಒ ಕಛೇರಿಯಲ್ಲಿರಬೇಕಾಗಿದ್ದು, ಆಪಾದಿತ ನೌಕರರ ಬಳಿ ಸದರಿ ಬಿಲ್ಲಿನ ಕಡತವನ್ನು ವಶಪಡಿಸಿಕೊಳ್ಳುವ ಪ್ರಮೇಯವೇ ಇರುತ್ತಿರಲಿಲ್ಲ. ಇದಲ್ಲದೇ ಪಿರ್ಯಾದುದಾರರ ಬಿಲ್ಲಿಗೆ ಆಕ್ಷೇಪಣೆಗಳನ್ನು ಎತ್ತಲಾಗಿದೆ ಅದಕ್ಕೆ ಬಿಇಒ ರವರು ಉತ್ತರ ನೀಡಬೇಕಾಗಿದೆ. ಇದಕ್ಕೆ ಹಾಗೂ ಇದನ್ನು ಪಿರ್ಯಾದುದಾರರಿಗೆ ತಿಳಿಸಿದ ಬಗ್ಗೆ ಯಾವುದೇ ಸಾಕ್ಷಿ/ಪುರಾವೆಗಳಿಲ್ಲ. ಆರೋಪಿತ ನೌಕರರು ಇದನ್ನು ಮರೆಮಾಚಿ ಪಿರ್ಯಾದುದಾರರಿಂದ ಹಣಕ್ಕೆ ಬೇಡಿಕೆ ಇಟ್ಟಿರುವಂತೆ ತೋರುತ್ತದೆ. ಆರೋಪಿತ ನೌಕರರು ಪಿರ್ಯಾದಾರರಿಗೆ ಸಾಲ ನೀಡಿರುವ ಸಂಭಾವ್ಯತೆಯನ್ನು ರುಜುವಾತು ಮಾಡುವುದರಲ್ಲಿ ವಿಫಲರಾಗಿರುತ್ತಾರೆ. ಆಪಾದಿತ ನೌಕರ ಶ್ರೀ ಪರಮೇಶ್ವರ ಹೆಚ್. ತೋಳೆ, ನಿವೃತ್ತ ಪ್ರ.ದ.ಸ., ಖಜಾನೆ ಇಲಾಖೆ ಇವರ ಉತ್ತರವನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಆರೋಪಿತ ನೌಕರರು ಫಿರ್ಯಾದಿಗಾರರಿಗೆ ಕೈ ಸಾಲ ನೀಡಿದ್ದೆ, ಅದನ್ನು ಹಿಂದಿರುಗಿಸಿರುತ್ತಾರೆ ಎಂಬ ಬಗ್ಗೆ ಅವರು ಟ್ರ್ಯಾಪ್ ಆದ ಸಮಯದಲ್ಲಿ ತಮ್ಮ ರಕ್ಷಣೆ ಕುರಿತಂತೆ ಯಾವುದೇ ಆಧಾರಗಳನ್ನು ಒದಗಿಸಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

ಆರೋಪಿತ ನೌಕರರು ವಿಚಾರಣೆ ನಡೆಸಿದ ಕ್ರಮ ನಿಯಮಾನುಸಾರವಾಗಿಲ್ಲವೆಂದು ನ್ಯೂನ್ಯತೆಗಳನ್ನು ತಿಳಿಸಿದ್ದು, ಪರಿಶೀಲಿಸಲಾಗಿ ಲೋಕಾಯುಕ್ತ ವಿಚಾರಣಾಧಿಕಾರಿಗಳು ನಡೆಸಿದ ಇಲಾಖಾ ವಿಚಾರಣೆಯು ನಿಯಮಾನುಸಾರವಾಗಿಯೂ ಇರುತ್ತದೆ.

ಇಲಾಖಾ ವಿಚಾರಣೆಗಳು-ನ್ಯಾಯಾಲಯದ ವಿಚಾರಣೆಗಳು ಬೇರೆ ಬೇರೆಯಾಗಿದ್ದು, ಇಲಾಖಾ ವಿಚಾರಣೆಗಳು ಅರೆ ನ್ಯಾಯಿಕ ವ್ಯವಧಾನವಾಗಿದ್ದರೆ, ನ್ಯಾಯಾಲಯದ ಪ್ರಕರಣಗಳು ಸಂಪೂರ್ಣ ನ್ಯಾಯಿಕ ವ್ಯವಧಾನವನ್ನು ಹೊಂದಿರುತ್ತದೆ. ಇಲಾಖಾ ವಿಚಾರಣೆಗಳು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ 1957 ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು ದುರ್ನಡತೆ ಎಂಬ ಪದಕ್ಕೆ ಆಧರಿಸಲಾಗಿರುತ್ತದೆ. ನ್ಯಾಯಾಲಯದ ವಿಚಾರಣೆಗಳು ಐ.ಪಿ.ಸಿ. ಸಿ.ಆರ್.ಪಿ.ಸಿ., ಸಿ.ಪಿ.ಸಿ. ಸೂಕ್ಷ್ಮ ಕಾಯ್ದೆ ಲಂಚ ನಿರ್ಮೂಲನೆ ಕಾಯಿದೆ 1988ಗಳನ್ನು ಆಧರಿಸಿರುತ್ತದೆ. ಆದುದರಿಂದ ಇಲಾಖಾ ವಿಚಾರಣೆ ಮತ್ತು ನ್ಯಾಯಾಲಯ ವಿಚಾರಣೆ ಬೇರೆ ಬೇರೆಯಾಗಿದ್ದು, ಎರಡೂ ವಿಚಾರಣೆಗಳನ್ನು ಬೇರೆ ಬೇರೆಯಾಗಿಯೇ ನೋಡಬೇಕಾಗಿರುತ್ತದೆ. ಹೀಗಾಗಿ ಆಪಾದಿತರ ವಾದವನ್ನು ಒಪ್ಪತಕ್ಕದಲ್ಲ.

ಆದ್ದರಿಂದ ಆರೋಪಿತರ ವಾದವನ್ನು ಒಪ್ಪಿಕೊಳ್ಳದೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಹಾಗೂ ಉಪ ಲೋಕಾಯುಕ್ತರ ಶಿಫಾರಸನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 224 ಆಖಇ 2010, ಬೆಂಗಳೂರು, ದಿನಾಂಕ: 16.04.2015**

ಕರ್ನಾಟಕ ನಾಗರೀಕ ಸೇವಾ ನಿಯಮಗಳ 214(1)ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪರಮೇಶ್ವರ ಹೆಚ್. ತೋಳೆ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಖಜಾನೆ ಇಲಾಖೆ ಅವರ ಪಿಂಚಣಿಯ ಶೇಕಡ 50ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಶಾಶ್ವತವಾಗಿ ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

**PR. 286**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59

**ಆರ್ಥಿಕ ಸಚಿವಾಲಯ**

**ವಿಷಯ :** ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 08 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಆಇ 123 ರಾಲೆಪ 2009, ದಿನಾಂಕ: 13–03–2014.

2) ನಿಯಂತ್ರಕರ ಪತ್ರ ಸಂಖ್ಯೆ:ಸಿಎಸ್ಎ 1 ಇಟಿಪಿ 90/2012/4080 ದಿ: 26–02–2015.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 08 ಹುದ್ದೆಗಳನ್ನು **ದಿ: 01–04–2014 ರಿಂದ 31–03–2015ರವರೆಗೆ** ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಲೆಕ್ಕ ಸಹಾಯಕರು | 03 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರಗಳಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿಯ 08 ತಾತ್ಕಾಲಿಕ ಹುದ್ದೆಗಳನ್ನು **ದಿನಾಂಕ: 01–04–2015 ರಿಂದ ದಿ: 31–03–2016ರ** ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯ ಬಗ್ಗೆ ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 123 ರಾಲೆಪ 2009 ಬೆಂಗಳೂರು, ದಿನಾಂಕ: 30–03–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು **ದಿನಾಂಕ: 01–04–2015** ರಿಂದ ಮೂರು ತಿಂಗಳವರೆಗೆ ಅಥವಾ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಮರುವಿನ್ಯಾಸ ಆದೇಶ ಹೊರಡಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಲೆಕ್ಕ ಸಹಾಯಕರು | 03 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR-270**

**ಎನ್.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ)

## ಸಹಕಾರ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಸಿಒ 86 ಸಿಎಲ್ಎಂ 2014 ಬೆಂಗಳೂರು, ದಿನಾಂಕ: 08-04-2015.**

ಸರ್ಕಾರದ ಆದೇಶ ಸಂಖ್ಯೆ: ಸಿಒ 86 ಸಿಎಲ್ಎಂ 2014, ದಿನಾಂಕ: 04-09-2014ರ ಆದೇಶದಲ್ಲಿ **"ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ"** ಆದನಂತರ **"ಸಂಘವು ನೋಂದಣಿಯಾದ 2008-09ನೇ ಸಾಲಿನಿಂದ 2013-14ನೇ ಸಾಲಿನವರೆಗೆ ಪುನರ್ ಲೆಕ್ಕ ಪರಿಶೋಧನೆಯನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರನ್ನು ನಿಯೋಜಿಸಿ ಮರು ಲೆಕ್ಕಪರಿಶೋಧನೆ ಕೈಗೊಳ್ಳಲು"** ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR-271**
**SC-50**

## ಸಹಕಾರ ಸಚಿವಾಲಯ

**ವಿಷಯ :** ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಮಲ್ಲೇಶ್ವರಂ ಸಹಕಾರ ಸಂಘದ ಆವರಣದಲ್ಲಿ ಸಹಕಾರ ಸೌಧ (ಭವನ) ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರಗಳ ಸಂಖ್ಯೆ: ಸಸಂನಿ/ಸಮಾಪನೆ/12/2014-15, ದಿನಾಂಕ: 10-07-2014, 06-12-2014, 16-01-2015, 23-01-2015, 16-02-2015 ಹಾಗೂ 26-02-2015

**ಪ್ರಸ್ತಾವನೆ:**

ಮೇಲೆ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸಮಾಪನೆಯಲ್ಲಿರುವ ಮಲ್ಲೇಶ್ವರಂ ಸಹಕಾರ ಸಂಘ ನಿ., 8ನೇ ಅಡ್ಡ ರಸ್ತೆ, 3ನೇ ಮುಖ್ಯ ರಸ್ತೆ, ಮಾರ್ಗೊಸಾ ರಸ್ತೆ, ಮಲ್ಲೇಶ್ವರಂ ಇಲ್ಲಿನ 100 x 150 ಚದರ ಅಡಿ ಆಸ್ತಿಯನ್ನು ಈಗಾಗಲೇ ಸಹಕಾರ ಸಂಘಗಳ ನಿಬಂಧಕರ ಹೆಸರಿಗೆ ನೊಂದಣಿ ಮಾಡಿಕೊಂಡಿದ್ದು ಸರ್ಕಾರಕ್ಕೆ ಸೇರಿದ ಈ ಜಾಗದಲ್ಲಿ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ಸಹಕಾರ ಇಲಾಖೆಯ ಕಛೇರಿಗಳು ಒಂದೇ ಕಟ್ಟಡದಲ್ಲಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಹಾಗೂ ಸದರಿ ಕಟ್ಟಡದಲ್ಲಿನ ಒಂದು ಅಂತಸ್ತನ್ನು ಸಹಕಾರಿ ಸಂಸ್ಥೆಗಳು ಉತ್ಪಾದಿಸುವ ವಸ್ತುಗಳ ಪ್ರದರ್ಶನ ಹಾಗೂ ಮಾರಾಟಕ್ಕೆ ಅವಕಾಶ ಕಲ್ಪಿಸುವ ಉದ್ದೇಶದಿಂದ ಬೆಂಗಳೂರಿನ ಮಲ್ಲೇಶ್ವರಂನಲ್ಲಿ **"ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಸಹಕಾರ ಸೌಧ (ಭವನ) ನಿರ್ಮಿಸಲು ಸರ್ಕಾರದಿಂದ ಯಾವುದೇ ಅನುದಾನ ಪಡೆಯದೇ ಸಹಕಾರ ಅಭಿವೃದ್ಧಿ ನಿಧಿ ಖಾತೆಯಿಂದ ಲಭ್ಯವಿರುವ ರೂ.2.00 ಕೋಟಿ ಸಮಾಪನೆಯಲ್ಲಿರುವ ಮಲ್ಲೇಶ್ವರಂ ಸಹಕಾರ ಸಂಘದಿಂದ ರೂ.5.00 ಕೋಟಿ ಸಹಕಾರ ಸಂಘಗಳ ಉಪನಿಬಂಧಕರು ಉತ್ತರ ವಲಯ, ಇವರ ಪಿಡಿ ಖಾತೆಯಿಂದ ರೂ.0.53 ಕೋಟಿ ಹಾಗೂ ಕಟ್ಟಡ ನಿರ್ಮಾಣಗೊಂಡ ನಂತರ ಬಾಡಿಗೆದಾರರಿಂದ ದೊರೆಯಬಹುದಾದ ಠೇವಣಿಯ ಮುಂಗಡ ಹಣ ರೂ.0.81 ಕೋಟಿ ಸೇರಿ ಒಟ್ಟು ರೂ.8.34 ಕೋಟಿ ವೆಚ್ಚದಲ್ಲಿ **"ಸಹಕಾರ ಸೌಧ"** (ಭವನ) ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮತಿ ನೀಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 142 ಸಂಮಾಸ 2014 (ಭಾಗ-3) ಬೆಂಗಳೂರು, ದಿನಾಂಕ: 08-04-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಯಲ್ಲಿರುವ ಬೆಂಗಳೂರಿನ ಮಲ್ಲೇಶ್ವರಂ ಸಹಕಾರ ಸಂಘದ ಆವರಣದಲ್ಲಿನ ಸರ್ಕಾರಕ್ಕೆ ಸೇರಿದ 100 x 150 ಚದರ ಅಡಿ ಜಾಗದಲ್ಲಿ ಸಹಕಾರಿ ಪಿತಾಮಹ ಶ್ರೀ ಸಿದ್ದರಾಮನಗೌಡ ಸಣ್ಣರಾಮನಗೌಡ ಪಾಟೀಲ್ ಇವರ ಹೆಸರಿನಲ್ಲಿ ಸಹಕಾರ ಸೌಧ (ಭವನ) ನಿರ್ಮಾಣ ಮಾಡಲು ಸರ್ಕಾರದಿಂದ ಯಾವುದೇ ಅನುದಾನ ಪಡೆಯದೇ ಸಹಕಾರ ಅಭಿವೃದ್ಧಿ ಖಾತೆಯಿಂದ ಲಭ್ಯವಿರುವ ರೂ.2.00 ಕೋಟಿ, ಸಮಾಪನೆಯಲ್ಲಿರುವ ಸಹಕಾರ ಸಂಘದಿಂದ ರೂ. 5.00 ಕೋಟಿ ಸಹಕಾರ ಸಂಘಗಳ ಉಪನಿಬಂಧಕರು ಉತ್ತರ ವಲಯ ಇವರ ಪಿಡಿ ಖಾತೆಯಿಂದ ರೂ. 0.53 ಕೋಟಿ ಹಾಗೂ ಕಟ್ಟಡ ನಿರ್ಮಾಣಗೊಂಡ ನಂತರ ಬಾಡಿಗೆದಾರರಿಂದ ದೊರೆಯಬಹುದಾದ ಠೇವಣಿಯ ಮುಂಗಡ ಹಣ ರೂ. 0.81 ಕೋಟಿ ಸೇರಿ ಒಟ್ಟು ರೂ. 8.34 ಕೋಟಿ ವೆಚ್ಚದಲ್ಲಿ **"ಸಹಕಾರ ಸೌಧ"** ನಿರ್ಮಾಣವನ್ನು ನಿಯಮಾನುಸಾರ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 109 ವೆಚ್ಚ-2/2015, ದಿನಾಂಕ: 18-03-2015ರಲ್ಲಿ ನೀಡಿರುವ ಸಹಮತಿ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಮೊದಲನೇ ಅನುಸೂಚಿ ನಿಯಮ 15ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR-272**
**SC-50**

## ಸಹಕಾರ ಸಚಿವಾಲಯ

**ವಿಷಯ :** ಸಮಾಪನೆಗೊಂಡಿರುವ ದಿ ಮೈಸೂರು ಕಾಫಿ ಸಂಸ್ಕರಣ ಸಹಕಾರ ಸಂಘ ನಿ., ಮೈಸೂರು ಇದರ ಆವರಣದಲ್ಲಿ ಆಡಳಿತ ಕಛೇರಿ ಕಟ್ಟಡ ಹಾಗೂ ಸಹಕಾರ ಅಕಾಡೆಮಿ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಪತ್ರಗಳ ಸಂಖ್ಯೆ: ಸಸಂನಿ/ಸಮಾಪನೆ/21/2002-03, ದಿನಾಂಕ: 27-11-2014, 23-01-2015, 18-02-2015 ಹಾಗೂ 04-03-2015

**ಪ್ರಸ್ತಾವನೆ:**

ಮೇಲೆ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ ಸಮಾಪನೆಗೊಂಡಿರುವ ದಿ. ಮೈಸೂರು ಕಾಫಿ ಸಂಸ್ಕರಣಾ ಸಹಕಾರ ಸಂಘದ ಜಾಗೆಯಲ್ಲಿ 1 ಎಕರೆ 13 ಗುಂಟೆ ಜಾಗವನ್ನು ಈಗಾಗಲೇ ನಿಬಂಧಕರ ಹೆಸರಿಗೆ ನೋಂದಣಿ ಮಾಡಿಕೊಂಡಿರುವುದಾಗಿ, ಸರ್ಕಾರಕ್ಕೆ ನೋಂದಣಿಯಾಗಿರುವ ಈ ಜಾಗದಲ್ಲಿ ಸಹಕಾರ ಇಲಾಖೆಯ ಆಡಳಿತ ಕಛೇರಿ ಕಟ್ಟಡ ನಿರ್ಮಾಣಕ್ಕೆ ಅಂದಾಜು ರೂ. 2.48 ಕೋಟಿ ವೆಚ್ಚವಾಗಲಿದ್ದು ಅದನ್ನು ಸಂಘದಲ್ಲಿ ಲಭ್ಯವಿರುವ ನಿಶ್ಚಿತ ಠೇವಣಿಯನ್ನು ಉಪಯೋಗಿಸಿಕೊಂಡು ಮೊದಲ ಹಂತದಲ್ಲಿ ಕಾಮಗಾರಿ ಕೈಗೊಳ್ಳಲಾಗುವುದು. ಹಾಗೂ ಸಹಕಾರ ಅಕಾಡೆಮಿ ಸ್ಥಾಪಿಸುವುದಕ್ಕೆ ಅಂದಾಜು ರೂ. 4.75 ಕೋಟಿ ವೆಚ್ಚವಾಗಲಿದ್ದು ಅದನ್ನು ಸಂಘದ ಹೆಸರಿನಲ್ಲಿರುವ 7 ಎಕರೆ 22 ಗುಂಟೆಗಳ ಪೈಕಿ 5 ಎಕರೆ ಜಮೀನನ್ನು ಮಾರಾಟ ಮಾಡಿ ಬಂದ ಹಣವನ್ನು ಉಪಯೋಗಿಸಿಕೊಂಡು ಉಳಿದ 2 ಎಕರೆ 22 ಗುಂಟೆ ವಿಸ್ತೀರ್ಣದಲ್ಲಿ ಸಹಕಾರ ಅಕಾಡೆಮಿ ಸ್ಥಾಪಿಸಲಾಗುವುದೆಂದು ಇದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚುವರಿ ಆರ್ಥಿಕ ಹೊರೆ ಉಂಟಾಗುವುದಿಲ್ಲವೆಂದು ತಿಳಿದಿ, ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 23 ಸಂಮಾಸ 2015, ಬೆಂಗಳೂರು, ದಿನಾಂಕ: 08-04-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಗೊಂಡಿರುವ ದಿ ಮೈಸೂರು ಕಾಫಿ ಸಂಸ್ಕರಣಾ ಸಹಕಾರ ಸಂಘ ನಿ., ಮೈಸೂರು ಇದರ ಆವರಣದಲ್ಲಿ ಸರ್ಕಾರಕ್ಕೆ ನೋಂದಣಿಯಾಗಿರುವ 1 ಎಕರೆ 13 ಗುಂಟೆಯಲ್ಲಿ ಸಹಕಾರ ಇಲಾಖೆ ಆಡಳಿತ ಕಛೇರಿ ಮತ್ತು ಸಮಾಪನಾ ಸಹಕಾರ ಸಂಘದ 2 ಎಕರೆ 22 ಗುಂಟೆ ಜಮೀನಿನಲ್ಲಿ ಸಹಕಾರ ಅಕಾಡೆಮಿ ಸ್ಥಾಪಿಸಲು ಪಾರದರ್ಶಕ, ಮುಕ್ತ ಮತ್ತು ಸ್ಪರ್ಧಾತ್ಮಕ ರೀತಿಯಲ್ಲಿ ಜಮೀನನ್ನು ಮಾರಾಟ ಮಾಡಿ, ಪಾರದರ್ಶಕ ಕಾಯ್ದೆ ಮತ್ತು ಚಾಲ್ತಿಯಲ್ಲಿರುವ ನಿಯಮಗಳಿಗನುಸಾರ ಸಹಕಾರ ಸಂಘಗಳ ನಿಬಂಧಕರು ಕೈಗೊಳ್ಳುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 128 ವೆಚ್ಚ-2/2015, ದಿನಾಂಕ: 18-03-2015ರಲ್ಲಿ ನೀಡಿರುವ ಸಹಮತಿ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977 ಮೊದಲನೇ ಅನುಸೂಚಿ ನಿಯಮ 15ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR-273**

**SC-50**

## ಕಾನೂನು ಸಚಿವಾಲಯ

**ವಿಷಯ :** ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರ ವಿರುದ್ಧದ ದೂರು ಹಾಗೂ ಪ್ರಮಾಣ ಪತ್ರ ನವೀಕರಿಸುವ ಬಗ್ಗೆ.

**ಓದಲಾಗಿದೆ:**

1. ತುಳಸಿದಾಸ್.ಎಲ್., ಇವರ ದೂರು ಮನವಿ ದಿನಾಂಕ: 17-11-2008.
2. ಸರ್ಕಾರದ ಪತ್ರ ಸಂಖ್ಯೆ:ಲಾ 147 ಎಲ್‌ಸಿಎಲ್ 2008, ದಿನಾಂಕ: 19-01-2009.
3. ಉತ್ತರ ಕನ್ನಡ, ಜಿಲ್ಲಾಧಿಕಾರಿ, ಕಾರವಾರ ಇವರ ಪತ್ರ ಸಂಖ್ಯೆ: ಡಿಸಿಬಿ:ಲಾವಿವ:153/2008-09, ದಿ: 05-02-2009
4. ಸರ್ಕಾರದ ಪತ್ರ ಸಂಖ್ಯೆ:ಲಾ 147 ಎಲ್‌ಸಿಎಲ್ 2008, ದಿನಾಂಕ: 29-04-2009.
5. ಜಿಲ್ಲಾ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರ ಪತ್ರ ಸಂಖ್ಯೆ:ಎಡಿಎಂ 2;46367/2010. ದಿನಾಂಕ: 29-09-2009.
6. ಸರ್ಕಾರದ ಪತ್ರ ಸಂಖ್ಯೆ:ಲಾ 147 ಎಲ್‌ಸಿಎಲ್ 2008, ದಿನಾಂಕ: 28-10-2010.
7. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರ ವಿಚಾರಣಾ ವರದಿಯ ಪತ್ರ ಸಂಖ್ಯೆ: ಎಡಿಎಂ-2/4022/2014, ದಿ: 30-09-2014.
8. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 67066/2010 (ಜಿಎಂ-ಆರ್‌ಇಎಸ್) ದಿನಾಂಕ: 02-02-2015 ರಂದು ನೀಡಿರುವ ತೀರ್ಪು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಮನವಿಯಲ್ಲಿ ಶ್ರೀ ತುಳಸಿದಾಸ್.ಎಲ್., ಕ್ಲಾತ್ ಮರ್ಚೆಂಟ್, ಬಜಾರ್ ರೋಡ್, ಹೊನ್ನಾವರ ಇವರು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ದೂರು ಅರ್ಜಿಯನ್ನು ಸಲ್ಲಿಸುತ್ತಾ, ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರು ನೋಟರಿ ವೃತ್ತಿಯನ್ನು ನಡೆಸುವಲ್ಲಿ ನಿಗದಿತ ಶುಲ್ಕಕ್ಕಿಂತ ಹೆಚ್ಚಿನ ಶುಲ್ಕವನ್ನು ಪಡೆದು ಸುಳ್ಳು ದಾಖಲೆಗಳನ್ನು ಸೃಷ್ಟಿಸಿ, ನಿಯಮಬಾಹಿರವಾಗಿ ಹಣವನ್ನು ಸಂಪಾದಿಸಿರುತ್ತಾರೆ. ಹಾಗೂ ಮುನ್ಸಿಪಲ್ ಕಾರ್ಪೋರೇಷನ್ ನೀಡಿರುವ ಪರವಾನಗಿಯನ್ನು ಉಲ್ಲಂಘಿಸಿ ಸಾರ್ವಜನಿಕ ರಸ್ತೆಯನ್ನು ಒತ್ತುವರಿ ಮಾಡಿಕೊಂಡು ಕಟ್ಟಡವನ್ನು ನಿರ್ಮಾಣ ಮಾಡಿ ದುರ್ನಡತೆಯನ್ನು ಎಸಗಿದ್ದಾರೆಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ದೂರನ್ನು ಸಲ್ಲಿಸಿರುತ್ತಾರೆ.

ಕ್ರಮ ಸಂಖ್ಯೆ:(2)ರ ಸರ್ಕಾರದ ಪತ್ರದಲ್ಲಿ ಅರ್ಜಿದಾರರು ನೀಡಿರುವ ದೂರು ಅರ್ಜಿಯು ನೋಟರಿ ನಿಯಮಾವಳಿ ನಿಯಮ XIII ರಂತೆ ಸೂಕ್ತ ಸಾಕ್ಷಿ ಪುರಾವೆಗಳ ಸಹಿತ ನೋಟರಿ ಕರ್ತವ್ಯ ದುರುಪಯೋಗ ಮಾಡಿಕೊಂಡಿರುವ ಬಗ್ಗೆ ದೂರನ್ನು ಸಲ್ಲಿಸುವಂತೆ ಅರ್ಜಿದಾರರನ್ನು ಕೋರಲಾಗಿತ್ತು.

ಕ್ರಮ ಸಂಖ್ಯೆ(3)ರ ಜಿಲ್ಲಾಧಿಕಾರಿಯವರ ಪತ್ರದಂತೆ ಶ್ರೀ ಎಸ್.ಎನ್.ನಾಯಕ್, ನೋಟರಿ ಇವರ ವಿರುದ್ಧ ಸ್ವೀಕೃತವಾಗಿರುವ ಎಲ್ಲಾ ದೂರು ಅರ್ಜಿಗಳನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ವಿಚಾರಣೆ ನಡೆಸುವಂತೆ ಸರ್ಕಾರವನ್ನು ಕೋರಿರುತ್ತಾರೆ. ಆ ಮೇರೆಗೆ ಕ್ರಮ ಸಂಖ್ಯೆ:(4)ರ ಪತ್ರದಲ್ಲಿ ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರ ವಿರುದ್ಧ ಸ್ವೀಕೃತವಾಗಿರುವ ಎಲ್ಲಾ ದೂರುಗಳ ಅರ್ಜಿಗಳ ಬಗ್ಗೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸುವಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(5)ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರು ಸರ್ಕಾರಕ್ಕೆ ಪತ್ರ ಬರೆಯುತ್ತಾ, ಶ್ರೀ ಎಸ್.ಎನ್.ನಾಯಕ್ ಇವರ ನೋಟರಿ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸಲು ಸಲ್ಲಿಸಿರುವ ಎಲ್ಲಾ ದಾಖಲೆಗಳನ್ನು ಸರ್ಕಾರಕ್ಕೆ ಸಲ್ಲಿಸಿ, ಸದರಿಯವರ ನೋಟರಿ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ:(6)ರ ಸರ್ಕಾರದ ಪತ್ರದಲ್ಲಿ ತಿಳಿಸಿರುವಂತೆ, ಸದರಿಯವರ ವಿರುದ್ಧ ದೂರು ವಿಚಾರಣೆ ಬಾಕಿ ಇದ್ದು, ತ್ವರಿತವಾಗಿ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರನ್ನು ಕೋರಲಾಗಿತ್ತು. ಆ ಮೇರೆಗ ಕ್ರಮ ಸಂಖ್ಯೆ:(7)ರ ವಿಚಾರಣಾ ವರದಿಯಂತೆ ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರ ವಿರುದ್ಧ ಸ್ವೀಕೃತವಾಗಿರುವ ಎಲ್ಲಾ ದೂರುಗಳನ್ನು ಕೂಲಂಕಷವಾಗಿ ವಿಚಾರಣೆ ನಡೆಸಿ, ಸದರಿಯವರ ಮೇಲೆ ಮಾಡಿರುವ ಎಲ್ಲಾ ಆರೋಪಗಳು ಆಧಾರ ಸಹಿತವಾಗಿದ್ದು, ಅಂತಿಮವಾಗಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಈ ಕೆಳಕಂಡಂತೆ ವಿಚಾರಣಾ ವರದಿಯನ್ನು ನೀಡಿರುತ್ತಾರೆ.

**"The allegations of mis-conduct leveled against the delinquent S.N.Nayak, Notary Public are not Proved"**

ಕ್ರಮ ಸಂಖ್ಯೆ:(8)ರಂತೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿ: 02-02-2015 ರಂದು ನೀಡಿರುವ ತೀರ್ಪಿನಂತೆ ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರನ್ನು ಮುಂದುವರೆಸುವ ವಿಚಾರದಲ್ಲಿ ದಿ:31-03-2015 ರೊಳಗಾಗಿ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನಿರ್ದೇಶನ ನೀಡಲಾಗಿರುತ್ತದೆ.

ಆ ಮೇರೆಗೆ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ392 ಎಲ್.ಸಿ.ಎಲ್ 2014, ಬೆಂಗಳೂರು, ದಿನಾಂಕ: 30-03-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರು ನೀಡಿರುವ ವಿಚಾರಣಾ ವರದಿಯಂತೆ ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ ಇವರ ಮೇಲೆ ಮಾಡಿರುವ ಆರೋಪಗಳು ಆಧಾರ ರಹಿತವಾಗಿರುವುದಾಗಿ ವಿಚಾರಣಾ ವರದಿಯನ್ನು ನೀಡಿರುವ ಹಿನ್ನೆಲೆಯಲ್ಲಿ ಹಾಗೂ ಮಾನ್ಯ ಕರ್ನಾಟಕದ ಉಚ್ಚ ನ್ಯಾಯಾಲಯವು ದಿನಾಂಕ: 02-02-2015 ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಶ್ರೀ ಎಸ್.ಎನ್.ನಾಯಕ್, ನೋಟರಿ, ಹೊನ್ನಾವರ, ಉತ್ತರ ಕನ್ನಡ, ಕಾರವಾರ ಇವರ ಮೇಲೆ ಮಾಡಿರುವ ಆರೋಪವನ್ನು ಮುಕ್ತಾಯ ಮಾಡಿ ಇವರ ನೋಟರಿ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಯೀದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2)

**PR-278**

**SC-15**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59